# ಮೊದಲ ಮಾತು

ನಮ್ಮ ಈ ಮಿಲಿನಿಯಂ ವಿಶೇಷ ಸಂಚಿಕೆ ಹಾಸ್ಯೋತ್ಸವ-99ರ ಈ ಶುಭ ಸಮಯದಲ್ಲಿ ಬಿಡುಗಡೆಯಾಗುತ್ತಿದೆ. ಇತ್ತೀಚೆಗೆ ಕೊರವಂಜಿ ಅಪರಂಜಿ ಟ್ರಸ್ಟ್ ಪ್ರಾರಂಭವಾಗಿ, ಅಪರಂಜಿ ಪತ್ರಿಕೆಯ ನಿರ್ವಹಣೆಯನ್ನು ವಹಿಸಿಕೊಂಡ ನಂತರ ಹೊರಬರುತ್ತಿರುವ ಮೊದಲ ವಿಶೇಷ ಸಂಚಿಕೆ ಇದು. ಬೀಚಿಯವರ ಸಂಸ್ಮರಣೆಯ ಅಂಗವಾಗಿ ಈ ಸಂಚಿಕೆಯಲ್ಲಿ ಈ ಹಿರಿಯ ನಗೆಗಾರರನ್ನು ಕುರಿತು ಬರೆದ ಹಲವು ಲೇಖನಗಳಿವೆ. ಅಲ್ಲದೇ, ಕೊರವಂಜಿಯಿಂದ ಆಯ್ದ ಉತ್ತಮ ಲೇಖನಗಳ ಸಂಕಲನ ''ಬೆಸ್ಟ್ ಆಫ್ ಕೊರವಂಜಿ'', ಕಮಲಾ ರಾಮಸ್ವಾಮಿಯವರು ಬರೆದಿರುವ ''ನಲಿವು ಗರಿ'', ಈ ಪುಸ್ತಕಗಳೂ ಸಹಾ ಈ ವಿಶೇಷ ಸಂಚಿಕೆಯೊಂದಿಗೇ ಬಿಡುಗಡೆಯಾಗುತ್ತಿದೆ.

ಈ ಎಲ್ಲ ಕೆಲಸಗಳ ಗುರುತರ ಜವಾಬ್ದಾರಿಯನ್ನು ಸಂತೋಷದಿಂದ ಭರಿಸಿ, ದಕ್ಷತೆಯಿಂದ ನಿರ್ವಹಿಸಿದ ಗೆಳೆಯರಾದ ಬೇಲೂರು ರಾಮಮೂರ್ತಿ, ಕೃಷ್ಣ ಸುಬ್ಬರಾವ್ ಇವರಿಗೆ ಅಪರಂಜಿ ಆಭಾರಿ. ಜಿ. ನಾಗೇಶ್ ಮತ್ತು ಎ.ಆರ್. ರಾಜಗೋಪಾಲ್ ಇವರುಗಳು ಬಿಡುವಿಲ್ಲದೇ ಓಡಾಡಿ, ಸಂಚಿಕೆಗೆ ಜಾಹಿರಾತುಗಳನ್ನು ಒದಗಿಸಿದ್ದಾರೆ. ಈ ಮಿತ್ರರಿಗೆ ಅಪರಂಜಿಯ ಕೃತಜ್ಞತೆಗಳು. ಚೊಕ್ಕವಾಗಿ ಡಿ.ಟಿ.ಪಿ. ಕೆಲಸವನ್ನು ನಿರ್ವಹಿಸಿದ ಒಮೇಗ ಲೇಸರ್ ಟೆಕ್‌ನ ರವಿ, ಮುದ್ರಣ ಕಾರ್ಯವನ್ನು ಶ್ರದ್ಧೆಯಿಂದ ಮಾಡಿಕೊಟ್ಟ ರವಿಗ್ರಾಫಿಕ್ಸ್‌ನ ವಿ.ಆರ್. ನಾಥ್ ಇವರೆಲ್ಲರಿಗೆ ನಮ್ಮ ನಮನ. ಎಲ್ಲಕ್ಕೂ ಮುಖ್ಯವಾಗಿ ಪತ್ರಿಕೆಯನ್ನು ಕೊಂಡು ಓದುತ್ತಿರುವ ನಿಮಗೆ, ಓದುವ ಎಲ್ಲ ಕನ್ನಡಿಗರಿಗೆ, ನಿಮ್ಮ ಪ್ರೋತ್ಸಾಹಕ್ಕಾಗಿ ನಾವು ಋಣಿಗಳು.

ನಗೆಗನ್ನಡಂ ಗೆಲ್ಗೆ

**– ಶಿವಕುಮಾರ್**



ಗೌರವ ಸಲಹೆಗಾರರು:
ಶ್ರೀ ಅ. ರಾ. ಸೇ.
ಶ್ರೀ ಶೇಷಗಿರಿ
ಸಂಪಾದಕ:
ಶಿವಕುಮಾರ್
ನಿರ್ವಹಣೆ:
ಬೇಲೂರು ರಾಮಮೂರ್ತಿ
ಕೃಷ್ಣ ಸುಬ್ಬರಾವ್

ಚಂದಾ ವಿವರ:

| | |
|---|---|
| ಬಿಡಿ ಪ್ರತಿ: | ರೂ. 15.00 |
| ವಾರ್ಷಿಕ ಚಂದಾ: | ರೂ. 60 |
| ಹತ್ತು ವರ್ಷದ ಚಂದಾ : | ರೂ. 500 |

ವಿಳಾಸ: ಕೊರವಂಜಿ ಅಪರಂಜಿ ಟ್ರಸ್ಟ್, 36, 6ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು- 560 003 (ಕೆಲಸದ ವೇಳೆ: ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ)

# ಈ ಸಂಚಿಕೆಯಲ್ಲಿ

ಸಂಪುಟ 17 ಜನವರಿ- 2000 ಸಂಚಿಕೆ - 4



ಮುದ್ರಣ: ಇಂಪ್ರೆಶನ್ಸ್, ಬೆಂಗಳೂರು - 3 ಅಕ್ಷರ ಜೋಡಣೆ: ಒಮೇಗಾ ಲೇಸರ್ ಟೆಕ್, ಬೆಂಗಳೂರು 27

# ನಮ್ಮ ಮಾನ್ಯ ಜಾಹೀರಾತುದಾರರು



# ಅಪರಂಜಿ

## (ತಿಳಿನಗೆಯ ಕಾರಂಜಿ)

ಸಂಪುಟ 17 ಜನವರಿ- 2000 ಸಂಚಿಕೆ - 4

ದಹರ ಉತ್ತರೇಭ್ಯಃ

- ಬ್ರಹ್ಮಸೂತ್ರಗಳು 1-3-5-14

ದಹರವೆಂದರೆ ಅಲ್ಪ. ಉತ್ತರವೆಂದರೆ ಮುಂದೆ ಹೇಳಿರುವ ಕಾರಣಗಳು.

ನಾವೆಲ್ಲರೂ ಒಂದು. ಎಂದಿನಿಂದಲೂ ಒಂದಾಗಿಯೇ ಇದ್ದೇವೆ. ನಾವು ಮನುಷ್ಯರು ಎಂದು ಹೆಮ್ಮೆ ಪಡುತ್ತಿದ್ದೇವೆ. ನಾವು ಬಹು ದೊಡ್ಡವರು ಎಂದು ಘೋಷಿಸುತ್ತೇವೆ. ಇದು ನಿಜ, ನಿಜವಾಗಿಯೂ ನಾವು ದೊಡ್ಡವರೇ, ಆದರೆ ಅಲ್ಪತೆಯ ಪ್ರದರ್ಶನವಾಗುತ್ತಿಲ್ಲವೇ?

ಇಲ್ಲಿ ಬಹು ಸಂಖ್ಯಾತ ಧರ್ಮಿಗಳಲ್ಲಿ ಬಲು ತಾರತಮ್ಯವಿದೆ. ನಾವು ಅದನ್ನು ಸರಿಮಾಡಿ ಮೂರನೆಯ ಸಹಸ್ರ ಮಾನದಲ್ಲಿ ಅದನ್ನು ನಮ್ಮದಾಗಿಸುತ್ತೇವೆ ಎಂದು ಅಲ್ಪ ಸಂಖ್ಯಾತರ, ಎಲ್ಲಾ ಸವಲತ್ತುಗಳನ್ನು ಪಡೆದಿರುವವರ ಹಿರಿಯರು ಹೇಳುತ್ತಾರೆ. ಉತ್ತರ ಐರ್ಲೆಂಡಿನಲ್ಲಿ ಏನಾಗುತ್ತಾ ಬಂದಿದೆ? ವಿಶ್ವಶಾಂತಿಯ ಮಬ್ಬನ್ನು ಕವಿಸಲೆತ್ನಿಸುವವರು ಹೇಳಬೇಕು. ಯಾರದೋ ಕೊಲೆಯಾಯಿತು ಎಂಬ ಬೊಬ್ಬೆ, Ground realities ಏನು ಎಂದು ಹೇಳಿದರೆ ಭಾವಣೆಯೇ ಹಾರಿಹೋದೀತು, ಯಾರ ಕೊಲೆಯೂ ಆಗದಿರಲಿ, ಈಗ ಆಗುತ್ತಿರುವಂತೆ ಸತ್ಯದ ಕೊಲೆ ಆಗಲೇಬಾರದು.

ಒಂದಲ್ಲ ಎರಡು ಮಾರಕ ಬಿರುಗಾಳಿಗಳು ವಾಯವ್ಯ ಪೂರ್ವಗಳಲ್ಲಿ ನಮ್ಮ ದೇಶಕ್ಕೆ ಅಪ್ಪಳಿಸಿದವು. ನಮ್ಮನ್ನು ಇಪ್ಪತ್ತೊಂದನೆಯ ಶತಮಾನಕ್ಕೆ ಅಣಿಯಾಗಿಸುತ್ತೇವೆಂದು ಹಿಂದೆಂದೋ ಬೊಬ್ಬಿಟ್ಟವರು ಏನು ಮಾಡಿದರು? ಮಾಡುತ್ತಿದ್ದಾರೆ? ಅವರು ಆದಷ್ಟು ಬೇಗ ಎಚ್ಚೆತ್ತುಕೊಳ್ಳಲಿ.

ನಮ್ಮ ದೇಶದ ಚರಿತ್ರೆಯ ಯಾವ ಅಂಶವನ್ನು ಅಧ್ಯಯನ ಮಾಡದೆ, ಮಾಡಲಿಷ್ಟವಿಲ್ಲದೆ ಯಾರದೋ ಮೂಗಿನ ನೇರಕ್ಕೆ ನಡೆಯುವವರು ಪದಚ್ಯುತರಾದರೆ ಬೊಬ್ಬೆ, ಪ್ರಪಂಚದ ಏಕೈಕ ಧರ್ಮವನ್ನು ಅಲ್ಲಗಳೆಯುವವರು ಬುದ್ಧಿಜೀವಿಗಳು.

ಇಪ್ಪತ್ತೊಂದನೆಯ ಕ್ರೈಸ್ತ ಶತಮಾನ ಏನು? ಎರಡು ಸಹಸ್ರಮಾನಗಳು ಕಳೆದವು. ಏನಾಯಿತು? ದಹರವಾಗಿಯೇ ಉಳಿದಿದೆ. ಉಳಿಯುತ್ತದೆ.

ಆದರೆ ಈ ಸೂತ್ರದ ಅಭಿಪ್ರಾಯವಿಷ್ಟೆ!

ಹೃದಯಾಕಾಶದಲ್ಲಿರುವ ಅಲ್ಪ ಅವಕಾಶದಲ್ಲಿರುವವನು ಪರಮೇಶ್ವರನೇ, ಜೀವನೂ ಅಲ್ಲ ಭೂತಾಕಾಶವೂ ಅಲ್ಲ.

ಆ ಪರಮೇಶ್ವರನು ರಾಷ್ಟ್ರಕ್ಕೂ ತನಗೂ ರಕ್ಷಣೆಯನ್ನೂ ಸದ್ಬುದ್ಧಿಯನ್ನೂ ಕೊಡಲಿ ಎಂದು ಅಪರಂಜಿಯು ನಸುನಗುತ್ತಾ ಪ್ರಾರ್ಥಿಸುತ್ತಾಳೆ.




ಂ ಪ್ರಕಾಶ್

ದೂರವಾಣಿ ಕೈಪಿಡಿ; ಕನ್ನಡಿಗರ ಅನಾಸಕ್ತಿ

- ಸುದ್ದಿ

ಅದರಲ್ಲಿ 'ನಂಬರ್' ಹುಡುಕಲು ಬಹಳ 'ಟೈಂ' ತಗೋಳುತ್ತೆ!!

★★★

ಕುರಿ. ಅಭಿವೃದ್ಧಿ ಮಂಡಲಿಗೆ ಪುನಶ್ಚೇತನ

- ಪತ್ರಿಕೆ

ಕುರಿಗಳು ಸಾರ್, ಕುರಿಗಳು!!

★★★

ಒಂದು ರೂಪಾಯಿ ವೇತನ ಪಡೆಯುವ ರಾಜ್ಯಪಾಲರು

- ಸುದ್ದಿ

ಆ ಹುದ್ದೆ ಕೊಟ್ಟರೆ ನಾವೂ ತಯಾರ್!!

★★★

ವೈದ್ಯರ ಮುಷ್ಕರ; ಸಂಧಾನ ವಿಫಲ

- ಸುದ್ದಿ

ವೈದ್ಯ - ಸರ್ಕಾರದ ಜಗಳದಲ್ಲಿ ರೋಗಿಗಳು ಬಡವಾದರು!

★★★

ಏಪ್ರಿಲ್ ಹೂಡಿಕೆದಾರರ ಮಾಸ; ಮಾನ್ಯ ಮುಖ್ಯಮಂತ್ರಿಗಳು

- ಪತ್ರಿಕೆ

**ಒಂದನೇ ತಾರೀಖು ಶುರು ಮಾಡುವುದಿಲ್ಲ ತಾನೆ??**

★★★

ಆಮೆ ಕಳ್ಳ ಸಾಗಾಣಿಕೆ ಯತ್ನ; ಮೂವರ ಬಂಧನ

- ಸುದ್ದಿ

**ಕಳ್ಳರು ವೇಗವಾಗಿ ಚಲಿಸಲಿಲ್ಲವಂತೆ!!**

★★★

ಆಸ್ತಿ ಘೋಷಣೆಗೆ ನ್ಯಾಯಾಧೀಶರ ನಿರ್ಧಾರ

- ಪತ್ರಿಕೆ

**ನ್ಯಾಯವೇ!!**

★★★

ಟಿ.ವಿ.ಯಲ್ಲಿ ಅಣಕು ನ್ಯಾಯಾಲಯ ಪ್ರಸಾರಕ್ಕೆ ಕೋರ್ಟ್ ತಡೆ

- ಸುದ್ದಿ

**ಅನ್ಯಾಯ**

★★★

ಈ ಶತಮಾನದಲ್ಲಿ ಸರ್ವೇ ಜನಾ ನಗುತೋ ಭವಂತಿ ಎಂದು ಅಪರಂಜಿ ಹಾರೈಸುತ್ತಾಳೆ!!

★★★

# ಗೋದತ್ತೆಗೆ ಇಂಗ್ಲೀಷ್ ಕಲಿಸಿದ್ದು

- ಭುವನೇಶ್ವರಿ ಹೆಗಡೆ

ಹಳ್ಳಿಯಿಂದ ನಮ್ಮ ನಗರದ ಫ್ಲಾಟ್‌ಗೆ ಬಂದ ಗೋದತ್ತೆ ಕಿಂಚಿತ್ತೂ ಗೊಣಗದೆ "ಸಿಟಿ ಅಂದ್ಮೇಲೆ ಹೀಗೇ ಮತ್ತೆ" ಎಂದಾಗ ನಮಗೆಲ್ಲ ಸಮಾಧಾನವಾಗಿ ಹೋಯ್ತು. ಸ್ವಲ್ಪ ದಿನದಲ್ಲೇ ಆಚೀಚೆ ಮನೆಯವರನ್ನು ಗುರುತು ಮಾಡಿಕೊಂಡು ಅಂಗಡಿ ಮಾರ್ಕೆಟ್ ಓಡಾಡುವಷ್ಟಾಗಿಬಿಟ್ಟರು. ಒಂದು ದಿನ "ನಂಗೆ ಒಂಚೂರು ನೀರು ಹಾಲು ದೋಭಿ ತರಕಾರಿ... ಇಷ್ಟಕ್ಕಾಗುವಷ್ಟು ಇಂಗ್ಲೀಷ್ ಕಲಿಸೇ ಅಂತ ದುಂಬಾಲು ಬಿದ್ದರು. ವಯಸ್ಸಾದವರು ಕಲಿಯೋ ಉತ್ಸಾಹ ತೋರಿಸ್ತಿದಾರೆ ಇಲ್ಲ ಅನ್ನೋಕಾಗತ್ಯೆ ಓ.ಕೆ. ಅಂದೆ. ಪಾಠ ಶುರು ಮಾಡಿದೆ.

"ಬೆಳಿಗ್ಗೆ ಎದ್ದು ಹಲ್ಲುಜ್ತಾ ಇದ್ದೀರಿ. ಮನೆ ಮಾಲಿಕರು ಎದುರಿಗೆ ಬರ್ತ್ತಾರೆ. ನಗು ಬರದಿದ್ರೂ ತುಟಿಯರಳಿಸಿದ ಹಾಗೆ ಮಾಡಿ "ಗುಡ್ ಮಾರ್ನಿಂಗ್" ಎನ್ನಬೇಕು. ಮಧ್ಯಾಹ್ನ ಮಲಗಿದ ಸಮಯ ನೋಡಿ ಪಕ್ಕದ ಮನೆ ವೃದ್ಧರು ಪೇಪರ್ ವಾಪಸ್ ಕೊಡೋಕೆ ಬರ್ತಾರಲ್ಲ ಆಗ 'ಗುಡ್ ಆಫ್ಟರ್‌ನೂನ್' ಎನ್ನಬೇಕು. ಸಂಜೆ ಬಂದು ಕೂತ ಎದುರು ಮನೆ ಕೆಲಸವಿಲ್ಲದ ... ರಾತ್ರಿ ಎಂಟು ಹೊಡೆದಾಗ ಇನ್ನು ಬರ್ತೀನ್ರೀ ಎಂದು ಎದ್ದು ನಿಂತಾಗ 'ಗುಡ್‌ನೈಟ್' ಎಂದು ಹೇಳಿ ಒಳಗೆ ಹೋಗಿಬಿಡಬೇಕು (ನಿಂತರೆ ಅವರು ಕೂತೇ ಬಿಡ್ತಾರೆ) ಇಂಥ ಪ್ರಾಥಮಿಕ ಪಾಠಗಳನ್ನು ಬಲುಬೇಗ ಕಲಿತ ಗೋದತ್ತೆಗೆ ಮುಂದಿನ ಪಾಠಕ್ಕೆ ತೊಡಗಿದೆ.

ತರಕಾರಿ ತಗೊಂಡು ಬರ್ತಿರ್ತೀರಿ ಯಾರೋ ಕದ್ರಿ ಪಾರ್ಕಿಗೆ ಹೋಗೋ ದಾರಿ ಯಾವ್ದು ಅಂತ ಕೇಳ್ತಾರೆ ನಿಮಗೆ ಗೊತ್ತಿರೋದಿಲ್ಲ. ಆಗ ನಮ್ಮೂರಲ್ಲಿ ಹೇಳೋ ಹಾಗೆ 'ಗೊತ್ತಿಲ್ಲಕಣಪ್ಪೋ' ಎನ್ನಬಾರದು. 'ಸಾರಿ' ನಂಗೊತ್ತಿಲ್ಲ ಅನ್ನಬೇಕು. ಸಿಟಿ ಬಸ್ಸಲ್ಲಿ ಯಾರದ್ದೋ ಜಡೆ ನಿಮ್ಮ ವ್ಯಾನಿಟಿ ಬ್ಯಾಗಿಗೆ ಸಿಕ್ಕು ಅವಳು ನಿಮ್ಮನ್ನು ದುರು ದುರು ನೋಡುತ್ತಿರುತ್ತಾಳೆ ಅದನ್ನು ಬಿಡಿಸಿಕೊಡುತ್ತಾ 'ಸಾರಿ' ಎನ್ನಬೇಕು. ನೀವು ಯಾರದ್ದಾದ್ರೂ ಕಾಲು ತುಳಿದಾಗ ನಿಮ್ಮ ಕೊಡೆಯ ಕಡ್ಡಿ ಯಾರ ತಲೆಗಾದರೂ ಕುಕ್ಕಿ ಅವರ ಕಣ್ಣಲ್ಲಿ ನೀರಿಳಿಯುವಾಗ ನೀವು ಅಳುಮುಖ ಮಾಡಿ 'ಸಾರಿ' ಎನ್ನಬೇಕು.

''ತರಕಾರಿ ಚೀಲದಲ್ಲಿ ತುಂಬಿದ್ದು ಜಾಸ್ತಿಯಾಗಿ ಎತ್ತೋಕಾಗ್ತಿಲ್ಲ ಆಗ ಅಂಗಡಿಯವನೋ ಅಥವಾ ಅಲ್ಲೇ ಇದ್ದ ಜಂಟ್ಲ್‌ಮ್ಯಾನನೋ (ಜಂಟ್ಲ್ ವುಮನ್ ಚೀಲ ಎತ್ತಿಕೊಡೋದಿಲ್ಲ) ಆ ಚೀಲಾನ ರಿಕ್ಷಾ ತನಕ ತಂದು ಹಾಕಿ ಕೊಟ್ರೆ 'ಥ್ಯಾಂಕ್ಸ್ ಕಣ್ರಿ' ಎನ್ನಬೇಕು. ಎರಡನೇ ಪಾಠವನ್ನೂ ಅದ್ಭುತವಾಗಿ ಕಲಿತು ಶಹಬ್ಬಾಸ್ ಗಿಟ್ಟಿಸಿಕೊಂಡರು ಗೋದತ್ತೆ. ಅವರೊಂದಿಗೆ ಗೇಟಿನ ಬಳಿ ನಿಂತಾಗೊಮ್ಮೆ ಕೊರಿಯರಾತ ಬಂದು ಇದು ಶಾಂತಪ್ನೋರ ಮನೆಯಾ? ಎಂದು ಕೇಳಿದಾಗ ''ಸಾರಿ ಇದು ರುದ್ರಪ್ನೋರ ಮನೆ'' ಎಂದು ಹೇಳಿ ನನ್ನತ್ತ ನೋಡಿದರು ಕರೆಕ್ಟ್ ಅಂದೆ. ಇನ್ನೊಂದು ದಿನ ನನ್ನ ಕೈಗೇ ಬಿಸಿ ಕಾವಲಿ ತಾಗಿಸಿ 'ಸಾರಿಕಣೇ' ಎಂದರು ಗುರುವಿಗೇ ತಿರುಮಂತ್ರ ಹಾಕ್ತೀರಾ? ಎನ್ನಬೇಕಾಯ್ತು. ಪಾಠ ಮುಂದುವರಿಯಿತು.

ಅಂಗಡೀಲಿ ಏನೋ ಕೊಂಡ್ಕೋಬೇಕಾಗಿದೆ ಅಂಗಡಿಯ ಮೆಟ್ಟಿಲ ಮೇಲೆ ಇಬ್ಬರು ಧಡಿಯರು ನಿಂತು ಮಾತಾಡ್ತಿದಾರೆ. ''ಹೇಗೆ ಹೊಸ ಸರ್ಕಾರ ಆಗಬಹುದೋ? ಎಂಬಂಥ ಚರ್ಚೆ (ಇಬ್ಬರು ಕೃಶಾಂಗನೆಯರೂ ಆಗಿರಬಹುದು) ''ಯಜಮಾನ್ರೂ ಹಾಗೇ ಇದಾರಾ ಸುಧಾರಿಸಿದಾರಾ... ಥರದ ಆಪ್ತ ಸಮಾಲೋಚನೆ. ನೀವು ಬಂದಿದ್ದನ್ನು ನೋಡಿ ಪಕ್ಕಕ್ಕೆ ಸರಿಯೋವಷ್ಟು ಬಾಹ್ಯ ಪ್ರಜ್ಞೆ ಇಬ್ಬರಿಗೂ ಇದ್ದಂತಿಲ್ಲ ಆಗ ನೀವು ಸುಮಾರು ದೊಡ್ಡ ದನಿ ಮಾಡಿಕೊಂಡು 'ಎಕ್ಸ್‌ಕ್ಯೂಸ್ ಮಿ' ಅನ್ನಬೇಕು. ದಾರಿ ಬಿಡ್ತಾರೆ. ಬಲು ಚುರುಕಾಗಿ ಗೋದತ್ತೆ ಫಾಲೋ ಮಾಡ್ತಿದ್ದದ್ದು ನೋಡಿ ನನಗೋ ಉತ್ಸಾಹ.

ಒಂದು ದಿನ ಅಂಗಡಿಗೆ ಹೋಗಿ ಬಂದ ಗೋದತ್ತೆ ಬಂದವರೇ ''ನಾನಿವತ್ತು ಒಂದು ಅಂಗಡಿಯಲ್ಲಿ ಚಿಲ್ಲರೆ ಮಾಡಿಸಿದೆ ಏನೂ ಸಾಮಾನು ಖರೀದಿಸದೇ ಚಿಲ್ರೆ ಕೊಟ್ಟ ಪಾಪ ಅಂತ ಒಂದು ಥ್ಯಾಂಕ್ಸ್ ಹೇಳಿದೆ. ಆಗ ಅವನು ಅದೇನೋ ಅಂದ್ರಪ್ಪ ನಮಗೆ ಯಾರಾದ್ರೂ thanks ಎಂದಾಗ ವಾಪಸ್ ಏನು ಹೇಳಬೇಕು ಅಂತ ನೀನು ಕಲಿಸಿಯೇ ಇಲ್ಲ' ಎಂದರು. ಅದು ಸಂದರ್ಭ ನೋಡಿ ಹೇಳ್ಬೇಕಾದ್ದು ಗೋದತ್ತೆ. ಸಲಿಗೆ ಇದ್ದವರು thanks ಹೇಳ್ದಾಗ ಬೇಕಾದ್ರೆ 'ವೆಲ್‌ಕಂ' ಅಂದರೆ ನಡೆಯುತ್ತೆ. ಯಾರಾದ್ರೂ Sorry ಅಂದಾಗ ಎಲ್ಲಾದ್ರೂ ವೆಲ್‌ಕಂ ಅಂದೀರ ಅಂತ ಅದನ್ನೆಲ್ಲ ಕಲಿಸ್ಲಿಲ್ಲ. ಸಾರಿ ಅಂದಾಗ ನಮ್ಮ ಧಾರಾಳತನ ತೋರ್ಸೋ ಥರಾ ಬೇಕಾದ್ರೆ 'ಇಟ್ಸ್ ಆಲ್‌ರೈಟ್' ಅನ್ನಬಹುದು. ಇವನ್ನು ಪ್ರಯೋಗಿಸುವ ಕಾತರದಲ್ಲಿ ಓಹೋ ಹಾಗಾ? ಎಂದರು ಗೋದತ್ತೆ.

ಮರುದಿನ ಎದುರು ಮನೆ ಗೌರಕ್ಕ 'ಸಾರಿ ಕಣ್ರಿ' ಎಂದು ಸಾರಿ ಹೇಳುತ್ತ ಒಳಗೆ ಬಂದವರು ನಿಮ್ಮ ತಾಮ್ರದ ಕೊಡಾನ ನಮ್ಮ ಶಂಕ್ರು ಭಾವೀಲಿ ಬೀಳಿಸ್ಬಿಟ್ಟ

ಸಾರೀರಿ ಎಂದರು. ಅವಳು ಹೇಳಿ ಬಿಡುವಷ್ಟರಲ್ಲಿ ಗೋದತ್ತೆ "Its all right" ಎಂದು ಹೇಳಿ ಆಯ್ತು. ಅದು ನೂರಾ ಮೂರನೇ ಬಾರಿ ನಮ್ಮ ತಾಮ್ರದ ಕೊಡ ಭಾವಿಗೆ ಬೀಳಿಸಿದ್ದು ಅವರು. ಈ ಗೋದತ್ತೆ ಭಾವಿಗೆ ಇಳಿದು ತೆಗೀತಾರ್‍ಯೆ ಎನ್ನಿಸಿ ಕೋಪವೇರಿ ಒಳಗೆ ಬಂದು ಕುಳಿತೆ.

ಅಷ್ಟರಲ್ಲಿ ಗೇಟಿನ ಕಡೆಯಿಂದ ಒಂದೇ ಸವನೆ ಕೀರಲಾಗಿ 'ಎಕ್ಸ್‌ಕ್ಯೂಸ್‌ಮಿ' ಎಂಬ ಸ್ವರ ಬಿಟ್ಟೂ ಬಿಡದೆ ಕೇಳಿ ಬರತೊಡಗಿತು ಅಲ್ಲೆಲ್ಲೋ ಹೂ ಕೊಯ್ತಿದ್ದ ಗೋದತ್ತೆ ಓಡಿ ಬಂದು "Excuse me" ಅನ್ನೋದನ್ನು ಎಲ್ಲಿ ಹೇಳ್ಬೇಕು ಅಂತ ಮಾತ್ರ ಕಲಿಸಿದೀಯ ಆದ್ರೆ, ಯರಾದ್ರೂ Excuse me ಅಂತಿರುವಾಗ ನಾವು ವಾಪಸ್ ಏನುತ್ರ ಕೊಡ್ಬೇಕು ಅಂತ ಕಲಿಸಿಯೇ ಇಲ್ಲ ಏನ್ಹೇಳ್ಬೇಕು?'' ಎಂದರು. ನನಗೋ ವರ್ಷಗಟ್ಟಲೆಯಿಂದ ನಮ್ಮ ಮನೆಯ ತಾಮ್ರದ ಕೊಡ ಭಾವಿಗೆ ಬಿದ್ದು ಬಿದ್ದು 'ಆಕಾರಹತ್ಯೆ' ಮಾಡಿಕೊಳ್ಳುವ ಚಿತ್ರವೇ ತಲೆಯಲ್ಲಿ ತುಂಬಿತ್ತು ಆದಷ್ಟೂ ಸಮಾಧಾನದಿಂದಲೇ ಉತ್ತರಿಸಿದೆ.

''ಯಾವುದಾದರೂ ಪ್ರಾಣಿ ನಮ್ಮ ಹತ್ತಿರ ಒಂದೇ ಸಮನೆ "Excuse me' ಅಂತ ಬಡಕೊಳ್ತಾ ಇದ್ರೆ ಅದಕ್ಕೆ ನಮ್ಹತ್ರ ಏನೋ ಕೆಲಸ ಆಗಬೇಕಿದೆ ಎಂದರ್ಥ. ಆಗ ನಾವು 'ಏನಾಗ್ಬೇಕಿತ್ತು' ಎಂಬರ್ಥದ ಒಂದು ನೋಟ ಹರಿಸಿದರೂ ಸಾಕು ಅವರ ಗೋಗರೆತ ಪ್ರಾರಂಭವಾಗುತ್ತದೆ'' ಎಂದು ವಿವರಿಸುತ್ತಿದ್ದಂತೆ ಗೋದತ್ತೆ ಗೇಟಿನ ಬಳಿ ಓಡಿಯಾಗಿತ್ತು ಮತ್ತು ಮರುಕ್ಷಣದಲ್ಲಿ ಬೆನ್ನಿಗೆ ಒಂದು ಚಲಿಸುವ ಅಂಗಡಿಯಂತೆ ತೋರುವ ಸೇಲ್ಸ್ ಗರ್ಲ್ ಒಬ್ಬಳನ್ನು ಕಟ್ಟಿಕೊಂಡು ಒಳ ಬಂದಳು.

ಆ ಚಲಿಸುವ ಅಂಗಡಿಯು ಸೀದಾ ಬಂದು ಹಾಲಿನ ಮಧ್ಯೆ ಕುಳಿತು ತನ್ನ ಅಗಾಧ ಗಾತ್ರದ ಚೀಲ ತೆರೆದು ಅಂಗಡಿಯನ್ನೇ ಪ್ರತಿಷ್ಠಾಪಿಸಿಕೊಂಡಿತು. ಅದರೊಳಗೆ ಹುದುಗಿದ್ದ ಅನೂಹ್ಯ ಅನಂತ ವಸ್ತುಗಳನ್ನು ತೆಗೆದು ವರ್ಣಿಸಿ ಅವೆಲ್ಲವನ್ನೂ ಖರೀದಿಸುವಂತೆ ನನಗೆ ಒತ್ತಾಯಿಸತೊಡಗಿದಳು.

ಅಷ್ಟರಲ್ಲಿ ಇನ್ನೂ ಪೂರ್ತಿ ಮಾತು ಬಾರದ ವರ್ಷದ ಹೊಸ್ತಿಲಲ್ಲಿದ್ದ ನನ್ನ ಮಗು ನನ್ನನ್ನು ಪರಚುತ್ತ ಚೀತ್ಕಾರವೆಬ್ಬಿಸಿ ನನ್ನನ್ನು ತಿವಿಯ ತೊಡಗಿತು. ತನಗೆ ವಿಪರೀತ ವಿಸ್ಮಯವಾದಾಗ, ಭಯವಾದಾಗ ಮತ್ತು ಅತಿ ಸಂತೋಷವಾದಾಗ ಅದು ಈ ಬಗೆಯ ಕಿರುಚು ಪರಚು ಕಾರ್ಯ ಕೈಗೊಳ್ಳುತ್ತದೆಯಾದ್ದರಿಂದ ಈಗ ಅದಕ್ಕೆ ಕಾರಣ ಯಾವುದಿರಬಹುದೆಂದು ನನಗೆ ಊಹಿಸಲು ಆಗಲಿಲ್ಲ. ಆ ಚಲಿಸುವ ವಿಸ್ಮಯದಿಂದ ಮಗು ಚೀತ್ಕರಿಸುತ್ತಿದ್ದರೆ ನನಗೇನೂ ಅಪಾಯವಿರಲಿಲ್ಲ. ಆದರೆ ಮಗುವಿನ ಚಹರೆ ನೋಡಿದರೆ ಆ ಚೀಲದಲ್ಲಿರುವ ಎಲ್ಲ ವಸ್ತುಗಳೂ ತನಗೇ ಸೇರಿದ್ದು ಅವುಗಳ ಜತೆ ಆಡುತ್ತ ಕೇಕೆ ಹಾಕುವ

ಕಲ್ಪನೆಯಲ್ಲಿ ಸಂತೋಷ ತಾಳಲಾರದೆ ನನ್ನನ್ನು ಹಾಗೆ ಪರಚುವಂತಿತ್ತು. ಅದೀಗ ನನಗೆ ಭಯದ ಚಿಹ್ನೆ.

ಮಗುವಿನ ಉತ್ಸಾಹ ಕಂಡ ಚೀಲದೊಡತಿ ಸುಮ್ಮನಿದ್ದಾಳೆಯೆ? ಚೀಲದ ಬುದಕ್ಕೆ ಕೈ ಹಾಕಿ ''ತಗೊಳ್ಳಮ್ಮ ನಮ್ಮ ಕಂಪನಿಯ ಬಿಸ್ಕತ್ತು. ಮಕ್ಕಳಿಗೆಂತಲೇ ತಯಾರಿಸಿದ್ದು ಮಗೂಗೆ ತಿನ್ನಿಸಿ'' ಎಂದು ಬಿಸ್ಕಿಟ್ ಪ್ಯಾಕೆಟೊಂದನ್ನು ಎದುರು ಹಿಡಿದಳು.

ಬೇಡ ನಮ್ಮಗೂಗೆ ಬಿಸ್ಕತ್ ತಿನ್ನಲು ಬರುವುದಿಲ್ಲ ಕೈಯಲ್ಲಿ ಕೊಟ್ರೆ ಅದ್ರಿಂದ ಗಾಳಿ ಹಾಕ್ಕೊಳುತ್ತೆ'' ಎಂದೆ.

ಅಯ್ಯೋ ಮಗು ಇಷ್ಟು ದೊಡ್ಡದಾದ್ರೂ ಬಿಸ್ಕತ್ ತಿನ್ನೋದು ಕಲಿಸಿಲ್ಲಾಂದ್ರೆ ನೀವೆಂಥಾ ತಾಯಿರೀ ತಗೊಳ್ಳಿ ಇದನ್ನೊಮ್ಮೆ ತಿನ್ನಿಸಿ ನೋಡಿ ಆಮೇಲೆ ನೀವೇ ನನ್ನನ್ನು ಹುಡ್ಕೊಂಡು ಬರ್ತೀರಿ.

''ಅಂದ್ರೆ ಬಿಸ್ಕತ್ ತಿನ್ನಿಸಿದಾಕ್ಷಣ ಏನಾದ್ರೂ ಎಡವಟ್ಟಾಗಿ ನಿನ್ನನ್ನು ಹಿಡಿದು ಚಚ್ಕೋಕೆ ಹುಡ್ಕೊಂಡು ಬರ್ತೀನಿ ಅಂತ್ಲಾ? ಎಂದುಬಿಟ್ಟೆ.

''ಯಾಕೋ ನಿಮ್ಮ ಮೂಡ್ ಚೆನ್ನಾಗಿಲ್ಲಾಂತ ಕಾಣುತ್ತೆ'' ಎಂದಳಾದರೂ ಸೋಲೊಪ್ಪಿಕೊಳ್ಳದೇ ಇಡೀ ಮನೆಯನ್ನೊಮ್ಮೆ ಮೂಸಿ ನೋಡಿದ ಅಭಿನಯ ಮಾಡಿ

''ಮನೇಲಿ ಒಂಥರಾ ದುರ್ಗಂಧ ತುಂಬ್ಕೊಂಡಿದೆಯಲ್ರೀ ನಿಮ್ಮಂತಹ ಮನೇಗೆ ಅಂತಾನೇ ನಮ್ಮ ಕಂಪೆನಿ ಈ 'ಆಡರ್ ರಿಮೂವರ್' ತಯಾರಿಸಿದೆ ತಗೊಳ್ಳಿ ಎನ್ನುತ್ತ ಬಾಟಲೊಂದನ್ನು ನೇರ ನನ್ನ ಮೂಗಿಗೇ ಹಿಡಿದುಬಿಟ್ಟಳು. ಅದರ ಕಟು ಘಾಟು ನನ್ನ ನೆತ್ತಿಯನ್ನು ತೂತು ಮಾಡಿ ಮನೆಯ ಮಾಡನ್ನೂ ತೂತು ಮಾಡಿದಂತೆನ್ನಿಸಿ ಬವಳಿ ಬಂದು ಬಿದ್ದೆ. ಎಚ್ಚರಾದಾಗ ಅದೇ ಚೀಲದಂಗಡಿಯ ಒಡತಿ ಚಿಕ್ಕ ಫ್ಯಾನೊಂದರಿಂದ ಗಾಳಿ ಹಾಕುತ್ತಿದ್ದಳು. ಇಂಥಾ ಸಂದರ್ಭಕ್ಕಾಗೇ ಸಿದ್ಧಪಡಿಸಿದ ಮಿನಿಫ್ಯಾನು ಎಂದು ತೋರಿಸಿದಳು. ಕೊನೆಗೂ ಏನೋ ಒಂದು ಪುಡಿ ಖರೀದಿಸಿದ ಮೇಲೇ ಅವಳಿಂದ ಮುಕ್ತಿ ದೊರೆಯಿತು.

ಆ ಚಲಿಸುವ ಅಂಗಡಿ ತೊಲಗುತ್ತಲೇ ಸೋಫಾದಲ್ಲಿ ಕುಸಿದು 'ಮೈಗಾಡ್' ಎಂದು ಹೇಳಿಬಿಟ್ಟೆ. ಗೋದತ್ತೆ ಏನಂದೆ ಹಾಗಂದ್ರೇನು? ಎನ್ನುತ್ತ ಹತ್ತಿರ ಬಂದರು. ಹಾಗಂದ್ರೆ ಗೋದತ್ತೆಗೆ ಕನ್ನಡವೇ ಚಂದ 'ದೇವರೇ' ಎಂದರ್ಥ. ನಾಳೆಯಿಂದ ನಿಮಗೆ ಇಂಗ್ಲೀಷ್ ಪಾಠ ಇಲ್ಲ ಗೋದತ್ತೆ. ಕನ್ನಡದಲ್ಲೆ ಮಾತಾಡಿ ಕನ್ನಡದಲ್ಲೆ ಉಸಿರಾಡಿ ಎನ್ನುತ್ತ ಕನ್ನಡ ಭುವನೇಶ್ವರಿಯನ್ನೊಮ್ಮೆ ನೆನೆದುಕೊಂಡು ಉಸಿರೆಳೆದುಕೊಂಡೆ.

# ಬೀಚಿಯೊಂದಿಗೆ ಮದರಾಸಿನಲ್ಲಿ

– ಎಸ್.ಎನ್. ಶಿವಸ್ವಾಮಿ

ಆಗ, ಅಂದರೆ ೧೯೪೦ರ ದಶಕದಲ್ಲಿ, ಮದರಾಸು ಇನ್ನೂ ಚೆನ್ನೈ ಆಗಿ ಪರಿವರ್ತಿತವಾಗುವ ಸೂಚನೆಗಳೇ ಇಲ್ಲದಿದ್ದಾಗ, ನಾನು ಅಲ್ಲಿಯ ಆಲಿಂಡಿಯಾ ರೇಡಿಯೋ ನಿಲಯದಲ್ಲಿ ಕಾರ್ಯಕ್ರಮ ನಿರ್ವಾಹಕನಾಗಿ ಕೆಲಸ ಮಾಡುತ್ತಿದ್ದೆ. ಇಂಗ್ಲಿಷ್ ಭಾಷಣ, ಧ್ವನಿಮುದ್ರಣಗಳು ಹಾಗೂ ಕೆಲವು ಚಿಲ್ಲರೆ ಕಾರ್ಯಕ್ರಮ ಶಾಖೆಗಳ ಜತೆಗೆ ಕನ್ನಡ ಕಾರ್ಯಕ್ರಮಗಳನ್ನು ನಿಯೋಜಿಸಿ ನಡೆಸುವ ಕೆಲಸ ನನ್ನ ಜವಾಬ್ದಾರಿಯಾಗಿತ್ತು. ನಾನು ಮದರಾಸಿಗೆ ಹೊಸಬ. ನನಗೆ ಅಲ್ಲಿ ದೊರಕಬಹುದಾಗಿದ್ದ ಕನ್ನಡ ಕಲಾವಿದರ ಪರಿಚಯವಿಲ್ಲ. ಕೆಲವು ಚಲನಚಿತ್ರ ನಟೀ ನಟರು, ಅವರುಗಳ ಪರಿವಾರ ಪರಿಚಯವಾಗಲು ಹೆಚ್ಚು ಸಮಯ ಬೇಕಾಗಿರಲಿಲ್ಲ. ಹಾಗೇ ಸಿನಿಮಾದ ಹೊರಗಿನ ಹಲ ಕೆಲವು ಕಲಾ ಹವ್ಯಾಸಿಗಳ ಪರಿಚಯವನ್ನು ಕ್ರಮೇಣ ಮಾಡಿಕೊಂಡೆ. ಹಾಗೂ ಹೀಗೂ ಪ್ರತಿ ತಿಂಗಳಿಗೂ ಎರಡು ಮೂರು ಕನ್ನಡ ಕಾರ್ಯಕ್ರಮ ಪ್ರಸಾರ ಮಾಡುವ ವ್ಯವಸ್ಥೆ ಮಾಡಿಕೊಂಡೆನಾದರೂ, ಹೊಸದಾಗಿ ನಾಡಿನ, ಪ್ರಹಸನ ಬರೆದುಕೊಡುವವರು ಮದರಾಸಿನಲ್ಲಿ ದುರ್ಲಭವೆನಿಸುತ್ತಿತ್ತು. ಕೆಲವನ್ನು ನಾನೇ ಬರೆದು ಪ್ರಸಾರ ಮಾಡಬೇಕಾಗಿತ್ತು. ಆ ಸಂದರ್ಭದಲ್ಲಿ ಒಂದು ದಿನ ಬೀಚಿ (ಆಗ ಆರ್. ಭೀಮಸೇನರಾವ್) ತಾವಾಗಿ ಬಂದು ನನ್ನನ್ನು ಭೇಟಿಮಾಡಿ ತಮ್ಮ ಪೂರ್ವೋತ್ತರ ತಿಳಿಸಿಕೊಂಡರಲ್ಲದೆ 'ಏಕೋದರರರು' ಎಂಬ ಕಿರು ಹಾಸ್ಯ ಚಿತ್ರದ ಹಸ್ತಪ್ರತಿಯನ್ನೂ ಪರಿಶೀಲಿಸಲು ನನಗೆ ಕೊಟ್ಟರು. ಇಬ್ಬರೇ ಅಣ್ಣ ತಮ್ಮಂದಿರು ಅಪ್ಪನ ಒಂದು ಮನೆ, ಚೂರುಪಾರು ಆಸ್ತಿಗಾಗಿ ತಮ್ಮ ತಮ್ಮಲ್ಲಿ ಕಚ್ಚಾಡಿಕೊಳ್ಳುವ ಲಘು ಚಿತ್ರ. ಆ ಕ್ಷಣ ಅದನ್ನು ಪ್ರಸಾರಕ್ಕಾಗಿ ಸ್ವೀಕರಿಸಿ, ಆಗಾಗ್ಗೆ ಹೀಗೆ ಬರುತ್ತಾ ಬರುವಾಗ ಕೈಲಿ ಏನಾದರೂ ಬರಹ ತರುತ್ತಾ ಇರಬೇಕೆಂದು ನಾನು ಬೀಚಿಯವರನ್ನು ಪ್ರೇರೇಪಿಸಿದೆ. ಅವರೂ ಸಂತೋಷದಿಂದ ಒಪ್ಪಿ ಮದರಾಸು ಬಾನುಲಿ ನಿಲಯಕ್ಕಾಗಿ ಆಗಿಂದಾಗ್ಗೆ ನಾಟಿಕ, ಪ್ರಹಸನ ಬರೆದುಕೊಡುತ್ತಿದ್ದರು.

ಅಂದಿನ ಪ್ರಾರಂಭಿಕ ಪ್ರಸಾರದ ದಿನಗಳಲ್ಲಿ ಹೊಸದೇನಾದರೂ ವಸ್ತು ನನ್ನ ತಲೆಯಲ್ಲಿದ್ದು, ಕೆಲಸದ ಒತ್ತಡದಿಂದಾಗಿ ಬರೆಯಲು ಸಮಯವಿಲ್ಲದೆ, ಮುಂದಿನ ಕಾರ್ಯಕ್ರಮಕ್ಕೆ ಸರಕು ಹುಡುಕುತ್ತಿರುವ ಪೇಚಾಟದಲ್ಲಿದ್ದಾಗ ಬೀಚಿಯವರನ್ನು ಕಂಡು ನನ್ನ ಕಥಾವಸ್ತುವನ್ನು ಬೆಳೆಸಿ ಪೂರಯಿಸುವ ಹೊಣೆಯನ್ನು ಅವರ ಹೆಗಲಮೇಲೆ ಹಾಕಿ ನಾನು ಬೆವರೊರೆಸಿಕೊಳ್ಳುತ್ತಿದ್ದೆ. ಇಂಥಾ ಒಂದು ವರ್ಗಾವಣೆಯ ಫಲಿತಾಂಶ ''ಸೈಕಾಲಜಿಸ್ಟ್ ಸಾರಂಗಪಾಣಿ'' ಎಂಬ ಪ್ರಹಸನ. ಇನ್ನೊಬ್ಬರ ಚಿತ್ತ ಸ್ವಾಸ್ಥ್ಯ ಕಾಪಾಡುವ ಪ್ರಯಾಸದಲ್ಲಿ ತಾನೇ ಚಿತ್ತಭ್ರಮಣೆಗೊಳಗಾದ ಮನೋವೈದ್ಯನೊಬ್ಬನನ್ನು ಕುರಿತ ಈ ಹಾಸ್ಯಕತೆ ಒಳ್ಳೆಯ ಮನರಂಜನೆ ಒದಗಿಸಿದ ರೇಡಿಯೋ ಪ್ರಹಸನವೆನ್ನಿಸಿಕೊಂಡಿತು. ನಾವಿಬ್ಬರೂ ಸೇರಿ ಚರ್ಚಿಸಿದ ಫಲವಾಗಿ ಹೀಗೇ ಹಲವಾರು ಲಘು ಚಿತ್ರಗಳಿಗೆ ಬೀಚಿಯವರು ಲೇಖನ ಒದಗಿಸಿದರು. ಹೆಚ್ಚು ಕಡಿಮೆ ಅವುಗಳಲ್ಲೆಲ್ಲಾ ತಾವೂ ಒಂದು ಪಾತ್ರ ವಹಿಸುತ್ತಿದ್ದರು.

ಅಂತೂ ನಾನು ಮದರಾಸಿನಲ್ಲಿ ಕಳೆದ ದೀರ್ಘ ಅವಧಿಯಲ್ಲಿ ಕೆಲವು ವರ್ಷಗಳು ಬೀಚಿಯವರ ಸ್ನೇಹ ಸಾಹಚರ್ಯೆಗಳಿಂದ ಎಷ್ಟೋ ಹಗುರವಾಗಿ ಉರುಳಿದವು. ನಾವು ವಾರಕ್ಕೊಮ್ಮೆಯಾದರೂ ನಮ್ಮ ನಮ್ಮ ಮನೆಗಳಲ್ಲಿ, ಹೊರಗೆ ಕಾಫಿ ಕ್ಲಬ್ಬುಗಳಲ್ಲಿ ಭೇಟಿಯಾಗುತ್ತಿದ್ದೆವು - ರೇಡಿಯೋ ಕಾರ್ಯಕ್ರಮಗಳನ್ನಲ್ಲದೆ ನಮ್ಮ ನಮ್ಮ ಹಾಸ್ಯ ಬರೆಹಗಳನ್ನೂ ಪ್ರಸ್ತಾಪ ಮಾಡುತ್ತಿದ್ದೆವು. ಆಗ ಅವರು 'ಜಯಂತಿ' ಪತ್ರಿಕೆಗೆ ಬರೆಯುತ್ತಿದ್ದ 'ತಿಂಮನ ತಲೆ' ಅಂಕಣವನ್ನು ನಾನು ತಪ್ಪದೆ ಓದುತ್ತಿದ್ದೆ. ನನ್ನ 'ಕತೆಗಾರ', 'ಕೊರವಂಜಿ' ಪತ್ರಿಕೆಗಳಲ್ಲಿನ ನಗೆ ಲೇಖನಗಳನ್ನು ಅವರೂ ಓದುತ್ತಿದ್ದರು.

ಬೀಚಿಯವರ ಒತ್ತಾಯದಿಂದ ನಾನು ಮದರಾಸಿನ ಯಾವುದೋ ಸಭಾಂಗಣದಲ್ಲಿ ಅವರ ''ಏಕೀಕರಣ'' ಎಂಬ ಹಾಸ್ಯ ನಾಟಕದಲ್ಲಿ ಭಾಗವಹಿಸಿದೆ. ಕನ್ನಡ ನಾಡಿನ ಬೇರೆ ಬೇರೆ ಪ್ರಕಾರದ ಭಾಷಾ ಶೈಲಿಯಿಂದಾಗಿ ಮಾತಿಗೇ ಅಪಾರ್ಥವುಂಟಾಗುವಷ್ಟು ಭಾಷಾ ವ್ಯತ್ಯಾಸವಾಗುವುದನ್ನು ಬೀಚಿ ಈ ಪ್ರಹಸನದಲ್ಲಿ ಬಹಳ ಸ್ವಾರ್ಸ್ಯವಾಗಿ ಚಿತ್ರಿಸಿದ್ದಾರೆ. ಗದಗದ ಗೃಹಸ್ಥ ದೇಸಾಯಿ, ಕನ್ನಡ ಏಕೀಕರಣ ಚಳುವಳಿಯ ಸಭೆಯೊಂದರಲ್ಲಿ ಭಾಷಣ ಮಾಡಲು ಸಂಸಾರ ಸಮೇತ ಪ್ರಯಾಣ ಸಿದ್ಧತೆ ನಡೆಸಿದ್ದಾರೆ/ಅವರ ಹೆಂಡತಿ ವೆಂಕಟಲಕ್ಷ್ಮಿ ಮೈಸೂರಿನಾಕೆ. ದೇಸಾಯಿಯ ತಾಯಿಯ ತವರೂರು ಬಳ್ಳಾರಿ. ಮನೆಯಲ್ಲಿ

ಅಡಿಗೆಯ ಮಾಣಿ ಕುಂದಾಪುರದವನು. ಇವರು ಹೊರಡುವ ಅವಸರದಲ್ಲಿ ಇವರ ಮನೆ ಹುಡುಕಿಕೊಂಡು ವಂತಿಗೆಗಾಗಿ ಬರುವ ಅಭ್ಯಾಗತ ಕೊಯಮತ್ತೂರಿನ ರಘೋತ್ತಮರಾಯ. (ಕೊಯಮತ್ತೂರು ರಹೋತ್ತರಾ) ಇವರ ಮಿಲನ, ಮಾತು ಕತೆಗಳ ಮಿಶ್ರಣದ ಅವಾಂತರ, ''ಏಕೀಕರಣದ'' ವಸ್ತು. ಮದರಾಸಿನಲ್ಲಿ ಈ ನಾಟಕದ ಮೊದಲ ಪ್ರದರ್ಶನದಲ್ಲಿ ನಾನು ರಹೋತ್ತರಾಯನ ವೇಷ ಹಾಕಿದ್ದೆ. ಬೀಚಿ ದೇಸಾಯರ ಪಾತ್ರ ವಹಿಸಿದ್ದರು. ನಾಟಕ ಬಹು ಯಶಸ್ವಿಯಾಯಿತು. ಮುಂದಿನ ದಿನಗಳಲ್ಲಿ 'ಏಕೀಕರಣ' ನಾಡಿನ ಬೇರೆ ಬೇರೆ ಊರುಗಳಲ್ಲಿ ಪ್ರದರ್ಶಿತವಾಗಿ ಪ್ರಖ್ಯಾತವಾಯಿತು. ನಾವು ಅದರ ಅಷ್ಟಿಷ್ಟು ರೂಪಾಂತರ ಮಾಡಿ ರೇಡಿಯೋ ಪ್ರಸಾರಕ್ಕೂ ಅಳವಡಿಸಿದೆವು.

ಬೀಚಿ ಬೆಂಗಳೂರಿಗೆ ಬಂದು ನೆಲೆಸುವ ಹೊತ್ತಿಗೆ (ಅವರು ಪೋಲೀಸು ಇಲಾಖೆಯಲ್ಲಿ ಆಫೀಸ್ ಮ್ಯಾನೇಜರ್ ಆಗಿದ್ದರು) ನಾನು ಇಲ್ಲಿಂದ ವರ್ಗವಾಗಿ ಉತ್ತರ ದಿಕ್ಕಿಗೆ ಹೊರಡುವ ಸಿದ್ಧತೆಯಲ್ಲಿದ್ದೆ. ಆಮೇಲಿನ ನಮ್ಮ ಸಂಪರ್ಕ ನಾನು ಬೆಂಗಳೂರಿಗೆ ಬಂದ ಸಂದರ್ಭಗಳಲ್ಲಷ್ಟೋ ಅಷ್ಟೆ. ಅವರೊಂದಿಗೆ ಮದರಾಸಿನಲ್ಲಿ ನಾನು ಕಳೆದ ಸಂತೋಷದ ಕ್ಷಣಗಳು ಮಾತ್ರ ನನ್ನ ಮನಸ್ಸಿನಲ್ಲಿ ಇಂದಿಗೂ ಹಚ್ಚ ಹಸಿರಾಗಿ ಉಳಿದಿವೆ.



# ಹನಿಗವನಗಳು

– ಎಚ್. ಡುಂಡಿರಾಜ್

**ಕಾಯುವುದು**

ಎಲ್ಲದಕ್ಕೂ ಕಾಲ ಕೂಡಿ ಬರಬೇಕು
ಕಾಯಬೇಕು ಅಲ್ಲಿವರೆಗೆ
ಸಾಮಾನ್ಯರಂತೆ ಕಾಯುತ್ತ ನಿಲ್ಲುವುದು
ಅನಿವಾರ್ಯವಾಯ್ತು ಶ್ರೀ ಹರಿಗೆ
ಅವತಾರವೆತ್ತಲು ಕಾಯಬೇಕಾಯಿತು
ದೇವಕಿಯ ಎಂಟನೆ ಹೆರಿಗೆ

**ಪತಿ**

ಹೆಂಡತಿ ಹೇಳಿದ್ದಕ್ಕೆಲ್ಲ
ಅಸ್ತು ಎನ್ನುವ
ಬಡಪಾಯಿ ಪತಿ,
ಮನೆ ಎಂಬ
ಮಿನಿ ದೇಶದ
ರಾಷ್ಟ್ರಪತಿ!

**ದ್ರಾಕ್ಷಿ**

ಬೆಂಗಳೂರಲ್ಲಿ ದ್ರಾಕ್ಷಿ
ಚೆನ್ನಾಗಿರುತ್ತದೆ.
ಧಾರವಾಡದಲ್ಲಿ ದ್ರಾಕ್ಷಿ
ಛಲೋ ಇರುತ್ತದೆ
ಬೆಳಗಾವಿಗೆ ಬಂದರೆ
Wine ಆಗಿರುತ್ತದೆ!

**ಅಚ್ಚ ಕನ್ನಡಿಗ**

ನಿಜವಾಗಿಯೂ
ಅಚ್ಚ ಕನ್ನಡಿಗ
ಅಂದರೆ ಇವನೇ
ಮಾತು ಮಾತಿಗೂ
ಅಚ್ಛಾ ಅಚ್ಛಾ
ಅನ್ನುತ್ತಾನೆ

# ಕರುಣೆಯೇ ಕುಟುಂಬದ ಕಣ್ಣು

– ಶ್ರೀನಿವಾಸ ವೈದ್ಯ (ಶೀನೂ)

ಅವತ್ತ ಭಾಗೀರತೀಬಾಯಿ ರಾಣಿಬೆನ್ನೂರಿನ್ಯಾಗಿನ ದೇಸಪಾಂಡೇರ ಚಾಳಿನ್ಯಾಗಿನ ತನ್ನ ಮನ್ಯಾಗ ಒಲೀ ಮುಂದ ಕೂತು ಹೋಳಿಗಿ ಮಾಡಲಿಕ್ಕೆ ಹತ್ತಿದ್ದಳು. ಎಡಗೈಯಾಗ ಕಣಕದ ಉಳ್ಳೀ ಬಟ್ಟಲದ ಹಂಗ ಹಿಡದು, ಬಲಗೈಲೇ ಅದರಾಗ ಹೂರಣ ತುಂಬಲಿಕ್ಕೆ ಹತ್ತಿದ್ದಳು. ಭಾಗೀರತೀಬಾಯೀದು ಹೋಳಿಗೀ ಮಾಡೋದರಾಗ ಎತ್ತಿದ ಕೈ. ಭಾಗೀರತೀಬಾಯಿ ಹೋಳಿಗಿ ಪ್ರಸಿದ್ಧಿ ಇಡೀ ರಾಣಿಬೆನ್ನೂರಿಗೇ - ಅಷ್ಟs ಯಾಕ - ಇಡೀ ಉತ್ತರ ಕರ್ನಾಟಕಕ್ಕನs - ಅಷ್ಟs ಯಾಕ - ಅತ್ತಲಾಗ ಮೈಸೂರು ಪ್ರಾಂತಕ್ಕೂ ಹಬ್ಬಿತ್ತು. (ರಾಣಿ ಬೆನ್ನೂರಿನ ನದೀ ದಂಡೀ ಮ್ಯಾಲ ನಿಂತು ಶಂಖಾ ಹೊಡೆದರ, ಅತ್ತಲಾಗ ಹರಿಹರದವರಿಗೆ ಕೇಳಸತ್ತಿತ್ತು ಆ ಮಾತು ಬ್ಯಾರೆ)

ಭಾಗೀರತೀಬಾಯಿ ಪಾಪ ಅವತ್ತ ಮುಂಝಾಲಿಂದ ಹೋಳಿಗಿ ಮಾಡಲಿಕ್ಕೆ ಕೂತಾಳ, ಆದರ ಯಾಕೋ ಕೈ ಸಾಗವಲ್ಲದು. ಮಧ್ಯಾನ್ಹ ಹನ್ನೆರಡು ಹೊಡೀಲಿಕ್ಕೆ ಬಂದರೂ ಇನ್ನೂ ಒಂದೇ ಒಂದು ಹೋಳಿಗಿ ಸಹಿತ ಆಗಿಲ್ಲ. ಇನ್ನೇನು ಮಗ ಘೋಣೀಮುಖೇಶ ತನ್ನ ಹೆಂಡತಿ ಮಕ್ಕಳನ್ನ ಕರಕೊಂಡು ಊರಿಂದ ಮಾರುತಿ ಕಾರಿನ್ಯಾಗ ಬರೋ ಹೊತ್ತಾತು. ಇನ್ನೂ ಅಡಿಗೀನs ಆಗಿಲ್ಲ.

ಮೊದಲೆಲ್ಲ ಹಿಂಗಾಗತಿದ್ದಿಲ್ಲ, ಅಗದೀ ಸಹಜಾಸಹಜs ಭಾಗೀರತೀಬಾಯಿ ಎರಡತಾಸಿನ್ಯಾಗ ಅಯಿವತ್ತರವತ್ತ ಮಂದೀ ಅಡಿಗೀ ಮಾಡಿ ಒಗೀತಿದ್ದಳು. ಅನ್ನ, ಸಾರು, ಹುಳಿ, ಚಿತ್ರಾನ್ನ, ಹೋಳಿಗಿ, ಕಾರೇಸ, ಕೋಸಂಬರಿ, ಬುರಬುರೀ, ಗವಲೀ ಪಾಯಸ, ಬಟವೀ ಪಾಯಸ, ಸಂಡಿಗ್ಗೊಜ್ಜು, ವಾಂಗೀಭಾತು, ಒಂದs ಎರಡs? ಅಗದೀ ಪೇಶವಾಯೀ ಪಕ್ವಾನ್ನದ ಅಡಿಗೀ ಸಹಿತ ಎರಡ ತಾಸಿನ್ಯಾಗ ಮಾಡಿ ಕಡೀಕ ಆಗತಿದ್ದಳು. ಹಂತಾದ್ದು ಈಗೀಗ ಯಾಕೋ ಭಾಗೀರತೀಬಾಯಿಗೆ ಕೈನೆs ಓಡೂದುಲ್ಲ.

ಅವಳಿಗೆ ಹಂಗೇನು ವಯಸ್ಸು ಭಾಳ ಆಗಿಲ್ಲ. ಭಾಳಂದರ ಐವತ್ತರ ಆಸಪಾಸು. ಇನ್ನೂ ಬೇಕಾಧಂಗ ಖೊಡ್ಡ ಖೊಡ್ಡ ಇದ್ದಾಳ. ಆದರೂ

ಮೊದಲಿನ್ಹಂಗ ಈಗ ಕೈನನ್ಸ ಸಾಗೂದುಲ್ಲ ಪಾಪ! ಯಾಕಂದರ ಈಗೀಗ ಭಾಗೀರತೀಬಾಯಿ ಕಾದಂಬರಿ ಓದಲಿಕ್ಕೆ ಹತ್ಯಾಳ. ಸದೋದಿತ ಒಂದಿಲ್ಲೊಂದು ಕಾದಂಬರಿ ಓದತಿರತಾಳ. 'ಒಂಡಿದ ಹೃದಯ', 'ಭಗ್ನಮನ', 'ಮುರಿದ ಮನೆ' 'ತಂತಿ ಕಿತ್ತಿದ ವೀಣೆ', 'ವೀಣೆ ಮುರಿದ ತಂತಿ', 'ಬುರುಡೆ ಒಡೆದ ತಂಬೂರಿ', 'ಮರಳಿ ತವರಿಗೆ', 'ದಗ್ಧಬಾಳು', 'ಶುದ್ಧಹಾಳು', 'ಹೃದಯದ ಮಿಡಿತ', 'ತುಡಿತ ಬಡಿತ', 'ಕಂಬನಿಯ ಮಹಾಪೂರ', 'ಹುಬ್ಬಳ್ಳಿಯ ಮಹಾಪೌರ', 'ಉಪ್ಪುನೀರು', 'ಸೊಪ್ಪುಸಾರು', 'ಜೀವಲೀಲೆ', 'ಭಾಂಡಿಗೆ ಹತ್ತಿದ ತಲೆ' ಹೀಂಗ ಒಂದಲ್ಲ ಎರಡಲ್ಲ ಕೈಗೆ ಸಿಕ್ಕದ್ದು ಓದತಾಳ. ಅದು ಕಾದಂಬರಿ ಆಗಿರಬೇಕು ಅಷ್ಟ!

ಈ ರೀತಿ ಇಂತಹ ಕಾದಂಬರಿಗಳನ್ನ ಓದಲಿಕ್ಕೆ ಹತ್ತಿದ ಮ್ಯಾಲ ಭಾಗೀರತೀಬಾಯಿಗೆ ಯಾಕೋ ತಾನೂ ಈ ಕಾದಂಬರಿಗಳ ನಾಯಿಕೆಯರಂತೆಯೇ ಹುತಾತ್ಮಳೇ ಆಧಂಗ ಅನಸತದ.

''.... ತನ್ನದರೇ ಏನು ಅಂತಹದೇ ಕಥಿ ಅಲ್ಲೇನು? ಇರೋತನಕ ಗಂಡ, ಅತ್ತೀ ಮಾವ ಯಲ್ಲಾರು ಕಾಡಿಸಿ ಪೀಡಿಸಿ ಇಟ್ಟರು. ಇದ್ದೊಬ್ಬ ಮಗ ಸಹಿತ ಆ ಸೊಸಿ ಮಾತ ಕೇಳಿ ಧೂರ ಅಮೇರಿಕಾಕ್ಕ ಹೋಗಿ ಕೂತಾನ. ಹೆಂತಾ ಧೊಡ್ಡ ದೇಸಪಾಂಡೇರ ಮನಿ ಸೊಸಿ ಆಗಿ ಬಂದೆ ಖರೆ ಆದರೆ ಇವತ್ತ ತಾನು ಬಡವಿ. ಇಪ್ಪತ್ತು ಎಕರೆ ಹೊಲ, ಒಂದ ಅಚ್ಚೇರು ಭಂಗಾರ, ಇದೊಂದು ಹತ್ತಮನಿ ಭಾಡ್ಗಿ ಬರೋ ಚಾಳು, ಇಷ್ಟು ಬಿಟ್ಟರ ಏನ ಅದ...'' ಎಂದು ಪದೇ ಪದೇ ತನ್ನ ಗತ ಜೀವನವನ್ನು ಮೆಲಕು ಹಾಕುತ್ತ, ದಾರುಣವಾದ ಹುತಾತ್ಮತನವನ್ನು ಚಪ್ಪರಿಸತಿರತಾಳ.

ಭಾಗೀರತಿಬಾಯಿ ಈ ಹುತಾತ್ಮತನದ ರಸಾನುಭೂತಿಯನ್ನ ಎಷ್ಟೊಂದು ಸಂತೋಷದಿಂದ, ಸುಖದಿಂದ ಅನುಭವಿಸತಿರತಾಳ ಅಂದ್ರ, ಈಗೀಗ ಅವಳು ಏನೇ ಮಾಡಿದರೂ, ಅತಗೋತ, ಕಣ್ಣೀರು ಸುರಿಸಿಗೋತ ಮೂಗು ಒರೆಸಿಗೋತ ಮಾಡತಿರತಾಳ. ಹಂಗಾಗಿ ಎಲ್ಲಾ ಕೆಲಸಕ್ಕೂ ತಡಾ ಆಗತsದ. ತಡಾ ಆಗೂತಲೇ ಸಿಟ್ಟು ಬರತsದ. ಸಿಟ್ಟು ಬರೂತಲೇ ಭಾಗೀರತೀಬಾಯಿ ''... ಅಯ್ಯೊ ನನ್ನ ಬಾಳೆಲ್ಲ ಕಣ್ಣೀರಿನ ಕೂಳಾಯಿತಲ್ಲ...'' ಅಂತ ಮತ್ತೆ ಹುತಾತ್ಮಳಾಗತಾಳ, ಮತ್ತೆ ಕೆಲಸಕ್ಕೆ ತಡಾ ಆಗತದ, ಮತ್ತ ಸಿಟ್ಟು ಬರತsದ ಮತ್ತ....

ಈಗೀಗ ಕಾದಂಬರಿ ಓದಲಿಕ್ಕೆ ಸುರೂ ಮಾಡಿದಾಗಿನಿಂದ ಆಕೀ ಭಾಷಾ ಸುಧಾರಿಸಲಿಕ್ಕೆ ಹತ್ತೇದ. ಮೊದಲೆಲ್ಲ ಏನಾರ ತ್ರಾಸ ಆಗಿದ್ದರ ''... ಯಾರಿಗೆ

ಹೇಳೋದದ? ನಮ್ಮ ನಮ್ಮ ಹಣೇಬಾರ... ಅನಭೋಗಿಸಬೇಕು. ದಾಸರು ಹೇಳ್ಯಾರಲ್ಲ ಈಸಬೇಕು ಇದ್ದು ಜೈಸಬೇಕು ಅಂತ...'' ಅಂತೆಲ್ಲಾ ಸಮಾಧಾನ ಮಾಡಿಕೋತಿದ್ದಳು. ಆದರ ಈಗ ಅಷ್ಟರ ಮ್ಯಾಲ ಆಕಿಗೆ ಸಮಾಧಾನ ಆಗೂದುಲ್ಲ. ಈಗೀಗ ಆಕಿಗೆ ಏನಾರ ತ್ರಾಸ ಆದರ, ''... ಅಯ್ಯೋ ನನ್ನ ವಿಧಿಯೇ, ಎನ್ನ ಭಾಗ್ಯದಲ್ಲಿ ಎಳ್ಳಷ್ಟೂ ಸುಖ ಸಂತೋಷಗಳಿಲ್ಲವೇ?... ಅಕಟಾ... ಹಲವು ಹತ್ತು (ಅಥವಾ ಹತ್ತು ಹಲವು) ನೋವನಿತ್ತು ಪೀಡಿಸಿದರೂ ನಿನಗೆ ದಯೆ ಬಾರದೇ... ಆಂSS.... ಆಂSS.... (ಎರಡು ಸಲ ನರಳಬೇಕು)... ಈ ಪುರುಷಪ್ರಧಾನ ಸಮಾಜದ ತುಳಿತಕ್ಕೊಳಗಾಗುವದನ್ನುಳಿದು ತನಗೆ ಅನ್ಯ ಮಾರ್ಗವೇ ಇಲ್ಲವೇ... ಓಹ್...'' ಎಂದು ಹಲುಬುತ್ತಾಳೆ. ಹೀಂಗ ಹಲುಬಿದಾಗ ಭಾಗೀರತೀಬಾಯಿಗೆ ಆರಾಮ ಆಗತದ, ಹೌರಗ ಅನಸತದ. ಆದರ ಕೆಲಸ ಆಗೂದುಲ್ಲ. ಎರಡರ ಪೈಕಿ ಯಾವದಾರ ಒಂದು, ಇಲ್ಲಾ ಹುತಾತ್ಮರಾಗಬೇಕು, ಇಲ್ಲಾ ಕೆಲಸಾ ಮಾಡಬೇಕು.

ಅವತ್ತೂ ಹಂಗS ನಡದಿತ್ತು. ಭಾಗೀರತೀಬಾಯಿ ಹೋಳಿಗಿ ಮಾಡಲಿಕ್ಕೆ ಹತ್ತಿದ್ದಳು... ಗರಿ ಗರಿಯಾಗಿ ಮಿದ್ದಿದ ಕಣಕದ ಹೊರಮೈಯ ಕವಚದಲ್ಲಿ ಬಲಗೈಯಿಂದ, ನಯವಾಗಿ, ಮೃದುವಾಗಿ, ಒಲುಮೆಯಿಂದ, ಅಂತಃಕರಣದಿಂದ ಹಿತಮಿತವಾಗಿ ಹೂರಣ ತುಂಬಲಿಕ್ಕೆ ಹತ್ತಿದ್ದಳು... ಇಷ್ಟೊಂದು ಪ್ರೀತಿಯಿಂದ ನೇವರಿಸಿದ... ಗರಿಗರಿಯಾದ ನವಿರಾದ (ಹಂಗಂದರ ಏನು?) ಬಂಗಾರಬಣ್ಣದ ಹೂರಣ ತುಂಬಿದ ಈ ಉಳ್ಳಿಯನ್ನು ಸುಡು ಸುಡು ಕಾಯ್ದ ಹಂಚಿನ ಮೇಲೆ ರಪ್ಪಂತ ಒಗೀಬೇಕಲ್ಲಾ... ''ಅಯ್ಯೋ ನನ್ನ ಬಾಳುವೆಯೂ ಹೀಗೆಯೇ ಆಯಿತಲ್ಲ...'' ಎಂದು ಭಾಗೀರತೀಬಾಯಿ ಹಲುಬುತ್ತಿದ್ದಳು.

(ವಾಚಕ ಮಹಾಶಯರೇ ಭಾಗೀರತೀಬಾಯಿ ಇನ್ನೊಂದು ಮೂವತ್ತು ಪುಟ ತುಂಬೋತನಕ ಹಂಗS ಹೋಳಿಗೀ ಮಾಡಿಕೋತನS ಕೂತಿರತಾಳ. ನಿಮಗೇನಾರ ಬ್ಯಾರೆ ಕೆಲಸ ಇದ್ದರೆ ಹೋಗಿ ಬರ್ರಿ, ಹರಕತ್ತಿಲ್ಲ.)

★★★★★

ಇವತ್ತ ಭಾಗೀರತೀಬಾಯಿ ಮಗ ಘೋಣೀಮುಖೇಶ ಹೆಂಡತಿ ಮಕ್ಕಳ ಸಂಗತೀ ಅಮೇರಿಕಾದಿಂದ ಬರಾವ ಇದ್ದಾನ. ಅದಕ್ಕಂತS ಆಕಿ ಹೋಳಿಗಿ ಮಾಡಲಿಕ್ಕೆ ಹತ್ಯಾಳ.

ಎಲ್ಲಾ ಕಾದಂಬರಿಗಳಲ್ಲೂ ಇರುವಂತೆ ವಿಧವೆ ಭಾಗೀರತೀಬಾಯಿ ಸಹಿತ ತನ್ನ ಮಗ ಘೋಣಿಮುಖೇಶನ್ನ ಅತ್ಯಂತ ಕಷ್ಟಪಟ್ಟು ಸಾಕ್ಯಾಳ. ಬರೇ ಉಪ್ಪಿಟ್ಟು

ಬಾಳೇಹಣ್ಣು ತಿಂದು ಏಕಾದಶಿ ಮಾಡ್ಯಾಳ (ಮರದಿವ್ಸ ದ್ವಾದಶಿ ನಸೀಕಲೇ ಎದ್ದು ಅನ್ನ, ಪಾಯಸ, ಕುಚಕಡಬು, ಚಿತ್ರಾನ್ನ ಮಾಡಿಕೊಂಡು ಪಾರಣೇ ಮಾಡ್ಯಾಳ) ''ಆದರ ಆ ಕೃತಘ್ನ ಮಗ ಘೋಣ್ಯಾ ಮಾತ್ರ ಯಂಥಾ ಛಂದ ಘೋಣಿಮುಖೇಶ ಅಂಥ ಹಣಮಪ್ಪನ ಹೆಸರು ಇಟ್ಟಿದ್ದನ್ನ ಬದಲಿಸಿ ಬರೇ ಮುಖೇಶ ಅಂತ ಮಾಡಿಕೊಂಡದ ಯೋಡಿನ್ನ ತಂದು, ... ಅಷ್ಟSS ಅಲ್ಲ, ಲಗ್ನ ಆಗೂತಲೇ ಆ ಸೊಸಿ ಅಂಬೋ ಬೋಕಾಣಿ ಮಗನ ಕಿವ್ಯಾಗ ಘಾಳಿ ತುಂಬಿ ತಾಯಿ ಮಗನ್ನ ಅಗಲಿಸಿ ಧೂರ ಅಮೇರಿಕಾಕ್ಕ ಕರಕೊಂಡು ಹೋಗ್ಯಾಳ ಹೊಯ್ಮಾಲಿ... ಇರಲಿ...''

ಕಾದಂಬರಿಯೊಳಗೆ ಹೀಂಗ ಅಮೇರಿಕಾಕ್ಕ ಹೋಗೋ ಬಡ ವಿಧವೆಯ ಮಗ 'ಗುಂಗುರು ಗೂದಲಿನ, ಆಳವಾದ ಕಪ್ಪು ಕಣ್ಣಿನ, ಜೇನಿನ ಬಣ್ಣದ ನುಣುಪಾದ ಕೂದಲಿನ ಸುಂದರವಾದ ದುಂಡುಮುಖದ ಕೆಂಪು ಬಣ್ಣದ ಎತ್ತರದ ಯುವಕನಾಗಿರತಾನ (ಕ್ಯಾಲೆಂಡರಿನೊಳಗಿನ ಕೃಷ್ಣನ ಹಂಗ ಅಥವಾ ರಾಧಾನ್ಹಂಗ ಇರತಾನ. ಕಾದಂಬರಿ ನಾಯಕ ಇಷ್ಟೊಂದು ಸುಂದರ ಹೆಣ್ಣಾ್ಯ ಇರಲಿಲ್ಲ ಅಂದರ ಕಾದಂಬರಿ ಬರೆಯೋದು ಹ್ಯಾಂಗ?) ಆದರ ಘೋಣಿಮುಖೇಶಗ ಮಾತ್ರ 'ಗುಂಗುರುಗೂದಲು' ಇರಲಿಲ್ಲ. 'ಗುಂಗುರು' ಸಾಯಲಿ ಗೂದಲನ ಇರಲಿಲ್ಲ. ಅವಂದು ಸಾದಗಪ್ಪು ಬಣ್ಣ, ಮೆಳ್ಳಗಣ್ಣು, ಎತ್ತರ ಧಡೂತಿಯಾಗಿ, ಯಮದೂತನ್ಹಂಗ ಇದ್ದಾನ, ಥೇಟ ಅವರಪ್ಪನ ಹಂಗನSS.

ಘೋಣಿ ಅಪ್ಪನ ಮಾತು ಬರೂತಲೇ ಭಾಗೀರತೀಬಾಯಿಗೆ ನೆನಪು ದಂಡೆತ್ತಿ ಬರತಾವ. ''... ಯಷ್ಟಂದರೂ ಈಗಿನ ಹೆಣ್ಣ ಹುಡಗರS ನಶೀಖವಾನರು. ಗಂಡಂದರನ್ನ ಸೆರಗಿನ್ಯಾಗ ಕಟಿಗೊಂಡು ಅಡ್ಡ್ಯಾಡತಾರ. ನಮ್ಮ ಕಾಲಕ್ಕ ಏನಿತ್ತS ತಾಯೀ... ಅತ್ತಲಾಗ ಮೊದಲನೇ ಬಾಣಂತನಕ್ಕ ತವರ ಮನೀಗೆ ಹೋಗೂತಲೇ ಇತ್ತಲಾಗ ಗಂಡಸೂರ ಕಾಲು ಮನೀ ಹೊರಗS... ತನಗೂ ಹಂಗS ಆತಲ್ಲSSS.... ಮೊದಲನೇ ಬಾಣಂತನಕ್ಕ ತವರಮನೀಗೆ ಹೋಗೂತಲೇ ಇತ್ತಲಾಗ ಇವರು ಚಿತ್ರಗಾರ ಯಮನೀ ಮನೀಗೆ ಓಡಾಡಲಿಕ್ಕೆ ಹತ್ತಿದ್ದರು. ಸುದ್ದಿ ಗೊತ್ತಾಗೂತಲೇ ತಾನು ಲಗೂ ಲಗೂನ ಬಾಣಂತನ ಮುಗಿಸಿಕೊಂಡು ಬಂದು, ಕಾಳಿ ಅವತಾರ ತಾಳಿ ಗಂಡನ್ನ ಕೈ ಜಗ್ಗಿ ಖಟ್ಟಿಗೆ ಹಚ್ಚಿದ್ದೆ. ಆವಾಗನS ಆ ಅತ್ತೀಮಾವ ಅಂಬೋ ಮುದಿ ಹದ್ದುಗಳು ನಡುವೆ ಬಾಯಿಹಾಕಿ 'ಇವೆಲ್ಲ ನಡೆಯೋದನS ದೇಶಪಾಂಡೇರ ಮನೆತನಕ್ಕ ಇದೆಲ್ಲ ಮಾಮೂಲು.

ಇದರಿಂದನು ನಮ್ಮ ಮನೀಗೆ ಅಬ್ರೂ...' ಅಂತ ಏನೇನೋ ಹುಚ್ಚುಚ್ಚು ಮಾತ ತಗೀಯೂತಲೇ ತಾನೂ ಇನ್ನಷ್ಟು ಚಂಡಿಯಾಗಿ 'ಹೌಧೌದು ದೇಸಪಾಂಡೇರು ಅಂದಕೂಡಲೇ ಬರೇ ತಂಬಾಕು ತಿನ್ನೋದು, ಹಾಡ ಹಾಡಿಕೋತ ಗೋಣ ಹಾಕ್ಕೋತ ಸಾನೇರ ಮನೀಗೆ ಹೊಗೋದು ಇಷ್ಟು ಏನು ನಿಮ್ಮ ಕೆಲಸ?... ಮನಿತನಕ್ಕ ಏನಾರ ವ್ಯವಸ್ಥಾ ಮಾಡಬೇಕೋ ಬ್ಯಾಡೋ... ನಮ್ಮ ಮಕ್ಕಳೂ ಮರಿಗೂ ಏನಾರು ಇಡಬೇಕು, ಉಳಿಸಬೇಕು ಅನ್ನೋ ಕರುಣಾ ಇರಬೇಕಲ್ಲಾ?' ಅಂತ ಮೂರುನಾಲ್ಕು ತಿಂಗಳು ಬಿಟ್ಟೂ ಬಿಡದು ಅತ್ತೂ ಕರದೂ ಹಟ ಹಿಡದು, ಊರಾಗಿನ ಮಂದಿನ್ನ ಕೂಡಿಸಿ ಪಂಚೇತಿ ಮಾಡಿಸಿ, ಕಡೀಕ ಹಳ್ಳದ ಕೆಳಗಿನ ಇಪ್ಪತ್ತು ಎಕರೆ ಜಮೀನು ತನ್ನ ಹೆಸರಲೇ ಮಾಡಿಸಿಕೊಂಡಿದ್ದೆ...."

ಆ ದಿವಸ ನೆನಪಾಗೂತಲೇ ಈಗಲೂ ಭಾಗೀರತೀಬಾಯಿಗೆ ಪಿತ್ತ ನೆತ್ತಿಗೇರತದ ಅವಡುಗಚ್ಚತಾಳ. ಮೂಗಿನ ಹೊಳ್ಳಿ ಹಿಗ್ಗಿ ಬಿಸಿಯುಸಿರು ಬರತದ ಜಮೀನು ಬರಿಸಿಕೊಂಡಿಂದ ಗಂಡ, ಅತ್ತೀ ಮಾವ ತನ್ನ ಮ್ಯಾಲ ಹೀಂಗ ವಿಷಾ ಕಾರಿದ್ದರು... ಕೂತರ ತಿವೀತಿದ್ದರು, ನಿಂತರ ತಿವೀತಿದ್ದರು. ಕಡೀಕ ಒಬ್ಬರ ಮ್ಯಾಲ ಒಬ್ಬರು ಸೆಟದು ಹೋದರು. ಈ ಪುರುಷ ಪ್ರಧಾನ ಸಮಾಜದ ಕ್ರೌರ್ಯವನ್ನು ಭಾಗೀರತೀಬಾಯಿ ಏನು ಕಡಿಮಿ ಅನುಭೋಗಿಸಿಲ್ಲ.

ಒಮ್ಮೊಮ್ಮೆ ಭಾಗೀರತೀಬಾಯಿಗೆ ಕನ್‌ಫ್ಯೂಶನ್ ಆಗತದ. ಅತ್ತೀ ಅಂಬೋ ಪ್ರಾಣಿನ್ನ ಪುರುಷಪ್ರಧಾನ ಸಮಾಜದಾಗ ಹಾಕಿ ಒಟ್ಟು ಚಚ್ಚಬೇಕೋ ಅಥವಾ ಆಕಿನ್ನೊಬ್ಬಾಕಿನ್ನ ಬ್ಯಾರ ಚಚ್ಚಬೇಕೋ ತಿಳೀಧಂಗ ಆಗತದು.

"... ಏನು ಆದರೂ ಅಂತಹ ದುಷ್ಟ ಅತ್ತಿನ್ನೂ ಬಿಟ್ಟಿದ್ದಿಲ್ಲ ತಾನೂ... ಕಡೀ ಕಾಲಕ್ಕ ಮುದಿ ಅತ್ತಿ ಹಾಸಿಗಿ ಹಿಡಿದು, ಬಾಯಿಬಿದ್ದು ಹೋಗೂತಲೇ, ಹೆಣ್ಣು ಮಕ್ಕಳು, ಅಂದರ ನಾದಿನಿಯರು ಅವರವರ ಊರಿಂದ ಬರೋದರಕಿಂತ ಮೊದಲೇ, ಅತ್ತೀ ಮೈಮ್ಯಾಲಿನವೂ ಒಳಗಿನವೂ ಎಲ್ಲಾ ವಸ್ತು, ವಡವಿ, ಬೊರಮಳಾ, ವಂಕಿ, ನಾಗಮುರಗಿ, ಚಪಲಹಾರಾ, ಹೆಳಭಂಗಾರಾ, ಉಂಗರಾ, ಪೋಚೇ, ನತ್ತು, ಬುಗಡಿ, ಒಂದೂ ಬಿಡದು ಯಚ್ಚಾವತ್ ತನ್ನ ತಾಬಾದಾಗ ತೊಗೊಂಡು ಮುಚ್ಚಿ ಇಟ್ಟಿದ್ದೆ... ಖೋಡಿ ಅತ್ತಿ ಸಾಯೋತನಕ ತನ್ನ ಹೆಣ್ಣಮಕ್ಕಳಿಗೆ ಏನೇನೋ ಏನೇನೋ ಸನ್ನೀ ಮಾಡೇ ಮಾಡತಿತ್ತು, ಮಾಡೇ ಮಾಡತಿತ್ತು, ಪಾಪ... ಹೌದು ಮತ್ತು! ನಮ್ಮದೂ ಸಂಸಾರ ಅದ. ನಮ್ಮ ಮಕ್ಕಳಿಗೂ ಏನಾರ ಇಡಬೇಕು ಮಾಡಬೇಕು ಅಂಬೋ ಕರುಣಾ

ಇರಬೇಕಲ್ಲ?... ಏನ ಮಾಡಿದರ ಏನ ಆದ? ಯಷ್ಟು ಬಡಕೊಂಡರ ಏನ ಆದ? ಮಗಾ ಘೋಣ್ಯಾಗ ಆ ಬೋಕಾಣಿ ಸೊಸೀಗೆ ಎಷ್ಟು ಅಂತಃಕರಣ ತೋರಿಸಿದರ ಏನದ... ಅದರದೇನು ದಾದಿಲ್ಲ ಫಿರ್ಯಾದಿಲ್ಲ... ತಮ್ಮ ಪಾಡಿಗೆ ತಾವು ಭುರ್‍ರಂತ ಇಂಗ್ಲೆಂಡೋ ಅಮೇರಿಕಾನೋ ಅಂತ ಹಾರಿಹೋಗಿಬಿಟ್ಟವು ಖೋಡಿಗಳು...''

ಭಾಗೀರತೀಬಾಯಿಗೆ ತನ್ನ ಗಂಡ ಸತ್ತಾಗಿನ ದಿವಸಗಳು ನೆನಪಾದವು ಕ್ರಿಯಾಕರ್ಮಕ್ಕಂತ ಬಂದ ಮಗ ಸೊಸಿ ಮುಂದ ಒಂದು ತಿಂಗಳ ಇದ್ದರು. ಆವಾಗನs ಆ ಅಳಬುರಕ ಘೋಣ್ಯಾನ ಹೆಂಡತಿ - ಅಂದರ - ತನ್ನ ಸೊಸಿ ಆಕೀತಾಯಿ ತನ್ನ ಬೀಗಿತ್ತಿ ಕೂಡಿ, ಹೌರಗs ಆಸ್ತಿ ಪಾಸ್ತಿದೂ, ಬಂಗಾರದ್ದೂ ಸುದ್ದೀ ತಗದಿದ್ದರು. 'ಪಾಟ್ಲಿ ಎಲ್ಲೆವ? ಬಿಲವಾರ ಬೋರಮಾಳಾ ಕಾಣಸೂದುಲ್ಲಲ್ಲ?' ಅಂತ ಕೆದಕಲಿಕ್ಕೆ ಹತ್ತಿದ್ದರು. ತನಗ ಸೂಕ್ಷ್ಮ ತಿಳಿಯೂತಲೇ ತಾ ಎದಿ ಎದೀ ಬಡಕೋತ ''... ನನ್ನ ಭಂಗಾರದಂಥ ಗಂಡನ್ನ ಕಳಕೊಂಡಮ್ಯಾಲ ಈ ಭಂಗಾರ ತಗೊಂಡು ಏನ ಮಾಡಲೇ ನಮ್ಮವ್ವ?... ಯಲ್ಲಾ ನಿಮದ ಅದs ಅಲ್ಲ... ನಂದೇನ ಅದs... ಆದರ ಹೊತ್ತುಗೊತ್ತು ಬ್ಯಾಡೇನ ಮ್ಹಾರಾಯಳ... ಹಿಂತಾ ಹೊತ್ತಿನ್ಯಾಗ ಭಂಗಾರದ ಮಾತು ಹೆಂಗರ ತಗೀತಿರೇ ನಮ್ಮವ್ವ ಆ ಪುಣ್ಯಾತ್ಮ ನಿಮ್ಮ ಮಾವ ಅಂಬಾವ ವೈಕುಂಠದ ಬಾಗಲತನಕಾ ಅರs ಮುಟ್ಯಾನೋ ಇಲ್ಲೋ... ಅಷ್ಟರಾಗ ನಿನಗೆ ಭಂಗಾರದ ಅವಸರ ಆತೇನ ಬೋಕಾಣೀ...'' ಎನ್ನುತ್ತ ಹಂಚು ಹಾರಿಹೋಗವರ ಹಂಗ ಅತ್ತೂ ಕರದೂ ಆಜುಬಾಜೂದ ಮಂದಿನ್ನ ಕೂಡಿಸಿ ಎಲ್ಲಾರನೂ ಘಾಬರಿ ಮಾಡಿಸಿ ಊರ ಬಿಡಿಸಿದ್ದೆ... ಅದಾದ ಮ್ಯಾಲ ಈಗs ಊರಿಗೆ ಬರತಾವ ಖೋಡಿಗಳು...''

''... ಅಮೇರಿಕಾದಿಂದ ಬೋಯಿಂಗ್ ವಿಮಾನದಿಂದ ಬೆಂಗಳೂರಿಗೆ ಬಂದು ಅಲ್ಲಿಂದ ಮಾರುತಿ ಕಾರಿನ್ಯಾಗ ಬರ್ತಾರೋ ಏನೋ...'' ಎನ್ನುತ್ತ ಭಾಗೀರತೀಬಾಯಿ ಮತ್ತ ಕನಸು ಕಾಣತೊಡಗಿದಳು. (ಯಾಕಂದರ ಆಕಿ ಓದಿದ ಕೊನೆಯ ಕಾದಂಬರಿಯೊಳಗಿನ ಗುಂಗುರು ಗೂದಲು ಅಮೇರಿಕಾದಿಂದ ಬೋಯಿಂಗ್ ವಿಮಾನದಾಗ ಬಂದು ಇಲ್ಲೆಲ್ಲಾ ಕೆಂಪು ಮಾರುತಿ ಕಾರಿನ್ಯಾಗ ಅಡ್ಡ್ಯಾಡಿರತಾನ)

ಭಾಗೀರತೀಬಾಯಿಗೆ ಇದ್ದಕ್ಕಿದ್ದಂಗ ದೇವರ ಮನೀ ಒಳಗ ಆಲೀಮನಿ ಡಬ್ಬೀ ಒಳಗ ತನ್ನ ವಸ್ತ ವಡವೀ ಭಂಗಾರ ಯಲ್ಲಾ ಇಟ್ಟದ್ದು ನೆನಪಾತು. ನೆನಪಾಗಿ

ಯದೀ ಧಸಕ್ಕಂತ್ಯು. "... ಈ ಸೊಸಿ ಹೊಯ್ಮಾಲಿ ಬಂದಳಂದರ ಮನೀಯಲ್ಲಾ ಅಡಾಮಡಾ, ಅಡಾಮಡಾ ಹುಡಿಕ್ಯಾಡತಾಳ... ಒಣಾ ಸಂಶೆ ಬ್ಯಾಡ" ಎನ್ನುತ್ತ ಎದ್ದು ದೇವರ ಮನೆಯಲ್ಲಿನ ತನ್ನೆಲ್ಲ ಆಭರಣಗಳನ್ನು ಗಂಟು ಕಟ್ಟಿ ಹಳೇ ಕೋಟಿ ಖೋಲ್ಯಾಗ ಜೋಳದ ಚೀಲದ ತಳದಾಗ ಮುಚ್ಚಿ ಇಟ್ಟು, ಖೋಲಿ ಬಾಗಲಾ ಗಡದ್ದ ಅಂತ ಜಡದು ಬಂದಳು. "... ಇಷ್ಟೂ ಮೀರಿ ಕೇಳಿದರ ಕೋಟಿಖೋಲ್ಯಾಗ ಹೆಗ್ಗಣ ಆಗ್ಯಾವ ಅದಕ್ಕೆ ಬಾಗಿಲಾ ಭದ್ರ ಮಾಡೇನಿ ಅಂದ್ರೆ ಆತು. ಈ ಅಮೇರಿಕಾದ್ದವು ಬಾಕೀದು ಬೇಖಾದ್ದ ಡೌಲ ಮಾಡಿದರೂ ಜೊಂಡಿಂಗ, ಇಲಿ, ಹೆಗ್ಗಣ ಅಂದ್ರ ಹೆದರಿ ಸಾಯತಾವ ಸುದ್ದಿ..." ಎನ್ನುತ್ತ ಇನ್ನೊಮ್ಮೆ ಚಿಲಕಾ ಎಳೆದು ಖಾತ್ರಿ ಮಾಡಿಕೊಂಡಳು.

★★★★★

ಹೀಂಗ ಖಾತರೀ ಮಾಡಿಕೊಂಡು ಬಂದು 'ಉಶ್ಶಪ್ಪ' ಎಂದು ನಿಟ್ಟುಸಿರು ಬಿಟ್ಟು, ಭಾಗೀರತೀಬಾಯಿ ಘೋಣೇಮುಖೇಶನ್ನ ಅವನ ಹೆಂಡತಿ ಮಕ್ಕಳನ್ನ ನೆನಪಿಸಿಗೋತ, ಅತ್ಯಂತ ಕಕ್ಕುಲಾತಿಯಿಂದ, ಅಂತಃಕರಣದಿಂದ, ವಾತ್ಸಲ್ಯಭರಿತ ಹೃದಯದಿಂದ ಎಡಗೈಯಲ್ಲಿ ಹಿಡಿದ ಮಿರಿಮಿರಿ ಮಿದ್ದಿನ ಕಣಕದ ಉಳ್ಳೀಯೊಳಗ, ಒಲುಮೆಯಿಂದ ನಲುಮೆಯಿಂದ ಹಿತಮಿತವಾಗಿ ಹೂರಣ ತುಂಬಲಿಕ್ಕೆ ಹತ್ತಿದಳು.



**ಬೆಳಗ್ಗೆ ಎದ್ದ ತಕ್ಷಣ ಬಿಸಿ ನೀರಿನಲ್ಲಿ ಎರಡು ಹನಿ ಜೇನು ತುಪ್ಪ ಹಾಕಿ ಕುಡೀರಿ. ಆಮೇಲೆ ಹ್ಯಾಗಾಗ್ತೀರ ನೀವೇ ನೋಡೋರಂತೆ**

# ಪುಸ್ತಕಾವಲೋಕನ

**ವಿರೋಧ ವಿಲಾಸ:**

ಲೇಖಕ - ಎಂ.ಎಸ್.ಕೆ. ಪ್ರಭು. ಪುಟಗಳು - 96, ಬೆಲೆ - 30 ರೂ.

ಪ್ರಕಾಶಕರು - ಅಭಿನವ, ನಂ: 4148/ಎ, 2ನೇ ಮುಖ್ಯರಸ್ತೆ, ರಾಜಾಜಿನಗರ 2ನೇ ಹಂತ, 'ಬಿ' ವಿಭಾಗ, ಬೆಂಗಳೂರು - 21.

ಅಪರಂಜಿಯ ಮೊದಲ ಸಂಚಿಕೆಗೆ ಲೇಖಕರು ನೀಡಿದ ಲೇಖನ ಈ ಸಂಕಲನದ ಮೊದಲ ಲೇಖನ. ಇಪ್ಪತ್ತು ಲೇಖನಗಳಿರುವ ಈ ಪುಸ್ತಕ, ದಿ|| ರಾ.ಶಿ. ಯವರು ಹೇಳಿದ 'ತಿಳಿನಗೆ'ಗೆ ಒಂದು ಜೀವಂತ ಉದಾಹರಣೆ. ಉತ್ತರ ಕರ್ನಾಟಕ, ದಕ್ಷಿಣ ಕನಾಟಕಗಳಲ್ಲಿ ಪ್ರಚಲಿತವಾಗಿದ್ದ ಇರುವ ಹಾಸ್ಯ ಪ್ರಜ್ಞೆಗಳೆರಡರ ಸಮ್ಮಿಲನ ಈ ಲೇಖನಗಳಲ್ಲಿವೆ.

'ಪುರುಷರ ಹಕ್ಕುಗಳು', ಮುಖಾಮುಖಿ, ಉದ್ಯೋಗಾರಣ್ಯಕ 1-2 ಆರ್ಥಿಕ ಚಿಂತೆ 1-2, ಹೆಚ್ಚೇನು ಎಲ್ಲ ಲೇಖನಗಳೂ ತಿಳಿವನ್ನು ಅರಸುವವರಿಗೆ, ಪ್ರಬುದ್ಧ ಹಾಸ್ಯವನ್ನು ಮೆಚ್ಚುವವರಿಗೆ ರಸದೌತಣ.

ಇಂತಹದೊಂದು ಕೃತಿ ಹಾಸ್ಯಪ್ರಿಯರ ಭಾಗ್ಯ.

**– ಪೀಪಿ ಮಿತ್ರ**



ಪಟ್ನದಾಗೆ ಆಟೋ ಇಂಗೇ ಇರ್ತೈತೇನಮ್ಮೀ?

# ಒಂದು ಕಥಾ ಪ್ರಸಂಗ

– ಶಿವು

ಪ್ರವೇಶ

ಭಗವದ್ಗೀತೆಯ ಒಂದು ಶ್ಲೋಕ, Y2K ಸಮಸ್ಯೆಯಿಂದಾಗಿ ಒಂದು ನೆಟ್ವರ್ಕ್ ಕ್ರಾಷ್ ಆಗಿದ್ದು, ಆಲ್ ಇಂಡಿಯಾ ರಿವ್ಯೂನಲ್ಲಿನ ಒಂದು ಲೇಖನ ಈ ಮೂರರ ದೆಸೆಯಿಂದ ಈ Y2K ಯುಗದ ತರುಣ ಪೀಳಿಗೆಯ ಹಲವರ ಜೀವನ ಪಥವೇ ಬದಲಾದದ್ದು ನಮ್ಮ ಕಥಾವಸ್ತು. ತಾನೇ ತಾನಾಗಿ ತೆರೆದುಕೊಳ್ಳುವ ಮುಂದಿನ ಘಟನಾವಳಿಗಳ ಸರಣಿಯನ್ನು ಓದುಗರಿಗೆ ಸರಳವಾಗಿ ತಿಳಿಯ ಹೇಳುವಾಗ ಕಥಕ ಒಂದು ಸಮಸ್ಯೆಯನ್ನು ಇದುರಿಸಬೇಕಾಗುತ್ತದೆ. ಜನಸಾಮಾನ್ಯರಿಗೆ ಅಷ್ಟಾಗಿ ಪರಿಚಯವಿಲ್ಲದ ಕೆಲವು ವಿಷಯಗಳನ್ನು ಎಷ್ಟರಮಟ್ಟಿಗೆ ಮೊದಲೇ ವಿವರಿಸುವುದು ಸೂಕ್ತ ಎಂಬುದೇ ಈ ಸಮಸ್ಯೆ. ಉದಾಹರಣೆಗೆ ಈ ಕಥೆಯಲ್ಲಿ ಭಗವದ್ಗೀತೆಯ ಒಂದು ಶ್ಲೋಕ ಮಹತ್ವದ ಪಾತ್ರ ವಹಿಸಿದೆ ಎಂದೆವು. ಆ ಶ್ಲೋಕವನ್ನು ಕಥೆಯ ಮಧ್ಯೆ ಪ್ರಸ್ತಾಪಿಸಿ, ಅನಂತರ ಅಲ್ಲೇ ಅದನ್ನು ವಿವರಿಸಿ, ರಸಭಂಗ ಮಾಡುವ ಬದಲು, ಇಲ್ಲೇ, ಈ ಪ್ರವೇಶದ ಹಂತದಲ್ಲೇ ಅದನ್ನು ವಿವರಿಸಿಬಿಡುವ ಎಂಬ ನಿರ್ಧಾರವನ್ನು ಕಥಕ ತೆಗೆದುಕೊಳ್ಳಬೇಕಾಯಿತು. ಇದೊಂದು ರಿಸ್ಕ್ ಪ್ರೋನ್ ನಿರ್ಧಾರ. ಇದರಿಂದಾಗಿ, ಓದುಗ, ಕಥಕನಿಗೆ ಈ ಹಂತದಲ್ಲೇ ವಿದಾಯ ಹೇಳಿ ಹೊರಟುಬಿಡಬಹುದು ಎಂಬ ಸತ್ಯ ಕಥಕನಿಗೆ ತಿಳಿದಿದೆ. ಆದರೂ ನಥಿಂಗ್ ವೆಂಚರ್ಡ್, ನಥಿಂಗ್ ಗೇಯ್ನ್ಡ್ ಎಂಬ ಸಾಮತಿಯನ್ನು ಆಧರಿಸಿ ಅವನು ಮುಂದುವರಿಯಬೇಕಾಗಿದೆ. ನಾಲ್ಕನೇ ಅಧ್ಯಾಯದ ಹದಿಮೂರನೆಯ ಶ್ಲೋಕ ಇದು. ಈ ಶ್ಲೋಕದ ಮೊದಲ ಸಾಲು ಹೀಗಿದೆ.

ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ

ಶ್ರೀ ಕೃಷ್ಣ ಹೇಳಿದ ಮಾತುಗಳಿವು. ಗುಣ ಮತ್ತು ಕರ್ಮಗಳ ವಿಭಾಗದ ಮೂಲಕ ಚಾತುರ್ವರ್ಣ್ಯವು ನನ್ನಿಂದ ಸೃಷ್ಟಿಸಲ್ಪಟ್ಟಿತು. ಎಂಬುದು ಇದರರ್ಥ. ಮೇಲ್ನೋಟಕ್ಕೆ ಇನ್ನೊಸೆಂಟಾಗಿ ಕಾಣುವ ಈ ಸಾಲುಗಳು, ನಮ್ಮ ಕಥೆಯ ಒಬ್ಬ ತರುಣನನ್ನು ಬ್ರಹ್ಮಾನಂದ ಸಚ್ಚಿದಾನಂದಗಳ ಸಮೀಪಕ್ಕೆ ಒಯ್ದರೆ, ಇನ್ನೊಬ್ಬ ನತದೃಷ್ಟ ಯುವಕನ ಹೃದಯವನ್ನು ತಲ್ಲಣಗೊಳಿಸುವ ಪರಿಣಾಮ ಬೀರಿದ್ದು ನಿಜಕ್ಕೂ ಆಶ್ಚರ್ಯಕರ.

ವೀರೆನ್

ಮುಂಬೈನ ನಾರಿಮನ್ ಪಾಯಿಂಟ್‌ನಲ್ಲಿನ ಒಂದು ಭವ್ಯ ಆಫೀಸ್ ಕಾಂಪ್ಲೆಕ್ಸ್. ಆ ಗಗನ ಚುಂಬಿ ಕಟ್ಟಡದ ಹತ್ತನೇ ಮಹಡಿಯಲ್ಲಿ ಒಂದು ಸುಸಜ್ಜಿತ ಕಛೇರಿ. ''ವಾಗ್ಮೋಡೆ ಅಂಡ್ ವಾಗ್ಮೋಡೆ, ಸಾಲಿಸಿಟರ್ಸ್'' ಎಂಬ ಫಲಕವಿದ್ದ ಆ ಕಛೇರಿಯನ್ನು ಪ್ರವೇಶಿಸುತ್ತಿದ್ದಂತೆಯೇ ನಿಮ್ಮ ಕಣ್ಣಿಗೆ ಬೀಳುವುದು ಪಂಚತಾರಾ ಮಟ್ಟದ ಒಂದು ಸ್ವಾಗತ ಕೊಠಡಿ. ಅತಿ ನುಣುಪಾದ ಲೆದರ್ ಹೊದಿಕೆಯ ಬೃಹತ್ ಸೋಫಾಗಳು ಗೋಡೆಯ ಒಂದು ಬದಿಯನ್ನು ಅಲಂಕರಿಸಿದ್ದರೆ, ಅವುಗಳ ಇದಿರು ಭಾಗದಲ್ಲಿ, ಹೊಳೆಯುತ್ತಿರುವ ದಪ್ಪ ಹಿತ್ತಾಳೆ ಅಕ್ಷರಗಳ ನಾಮಫಲಕಗಳನ್ನು ಹೊತ್ತ ತೇಗದ ಮರದ ಮೂರು ಬಾಗಿಲುಗಲು, ಬಾಗಿಲ ಹಿಂದಿನ ವ್ಯಕ್ತಿಗಳ ಶ್ರೀಮಂತಿಕೆಯನ್ನು ಸಾರಿ ಹೇಳುತ್ತಿದ್ದವು. ''ವೀರೆನ್ ಟಿ. ವಾಗ್ಮೋಡೆ'' ಫಲಕದ ಬಾಗಿಲ ಹಿಂಬದಿಯ ಆಫೀಸಿನ ವಿಶಾಲವಾದ ಮೇಜಿನ ಹಿಂದೆ, ಕೈಯಲ್ಲಿ ''ಆಲ್ ಇಂಡಿಯಾ ರಿವ್ಯೂ'' ಪತ್ರಿಕೆಯ ಸಂಚಿಕೆಯೊಂದನ್ನು ಹಿಡಿದು, ಆಸಕ್ತಿಯಿಂದ ಕಣ್ಣಾಡಿಸುತ್ತಾ ಕುಳಿತಿದ್ದ ವೀರೆನ್.

ವೀರೆನ್ ಒಬ್ಬ ಬ್ರಿಲಿಯೆಂಟ್ ಲಾಯರ್. ಇಪ್ಪತ್ತಾರನೆಯ ವಯಸ್ಸಿಗಾಗಲೇ ಅವನ ಬಡಾವಣೆಯ ಆಂಟಿಯರೆಲ್ಲಾ ಅವನಿಗೆ ಕನ್ಯಾದಾನ ಮಾಡಲು ಹವಣಿಸುತ್ತಿದ್ದರು ಅಂದರೆ ಮುಗಿಯಿತು ಅವನ ಬ್ರೀಫ್ ಬಯೋಡೆಟ. ತಾತನ ಕಾಲದಿಂದ ಸಂಗ್ರಹವಾಗಿದ್ದ ಆಸ್ತಿ ಹುಳಿತು ಹೋಗುವಷ್ಟಿದ್ದರೂ ವೀರೆನ್ ಸ್ವಂತ ಪ್ರತಿಭೆಯಿಂದ ತನ್ನ ಜೀವನವನ್ನು ರೂಪಿಸಿಕೊಳ್ಳುವ ಪಣ ತೊಟ್ಟಿದ್ದ. ಅವನಿಗೆ ಪ್ರತಿಭೆಯ ಕೊರತೆಯೇನೂ ಇರಲಿಲ್ಲ ಅನ್ನಿ. ನ್ಯಾಷನಲ್ ಲಾ ಸ್ಕೂಲಿನಲ್ಲಿ ಪ್ರಥಮ ರ್‍ಯಾಂಕ್ ಪಡೆದು, ಚಿನ್ನದ ಪದಕ ಗಳಿಸಿದ ನಂತರ ಅಮೆರಿಕೆಗೆ ತೆರಳಿ ಇಂಟರ್ ನ್ಯಾಷನಲ್ ಲಾ ದಲ್ಲಿ ಪದವಿ ಪಡೆದು, ಅಲ್ಲಿನ ಅವಕಾಶಗಳನ್ನೆಲ್ಲಾ ಕಡೆಗಾಣಿಸಿ ತಂದೆಗೆ ನೆರವಾಗಲು ತಾಯ್ನಾಡಿಗೆ ಹಿಂದಿರುಗಿದಂದಿನಿಂದ ವೀರೆನ್‌ನ ಪ್ರಾಕ್ಟೀಸ್ ಭರದಿಂದ ಸಾಗಿತ್ತು. ಅದರಲ್ಲೂ ಆರ್ಬಿಟ್ರೇಷನ್ ಕೇಸುಗಳು ಹೇರಳವಾಗಿ ಬಾಗಿಲಿಗೇ ಬಂದು ಬೀಳುತ್ತಿದ್ದವು.

ವೀರೆನ್ ಆ ಬೆಳಗ್ಗೆ ಪತ್ರಿಕೆಯನ್ನು ಓದುತ್ತಿದ್ದಾಗ ಒಮ್ಮಲೇ ''ಸ್ತ್ರೀ ಸ್ವಾತಂತ್ರ್ಯದ ಹೋರಾಟದಲ್ಲಿ ಮಹಿಳಾ ವಕೀಲರುಗಳ ಪಾತ್ರ'' ಎಂಬ ಬರಹ ಅವನ ಕಣ್ಣಿಗೆ ಬಿತ್ತು. ಸುಚಿತ್ರಾ ಎನ್. ರಾವ್, ಆ ಬರಹದ ಕರ್ತೃ. ಆ ಹೆಸರನ್ನು ನೋಡಿದೊಡನೇ ''ಓ ಮೈ ಗಾಡ್! ಸುಚೀ'' ಎಂದು ಉದ್ಗರಿಸಿದ ವೀರೆನ್. ಕೈಲಿದ್ದ ಪತ್ರಿಕೆ ಕೆಳಗೆ ಬಿತ್ತು. ಹಳೆಯ ನೆನಪುಗಳು ಮರುಕಳಿಸಿ ವೀರೆನ್ ಮನ ವಿಹ್ವಲಗೊಂಡಿತು. ಸಿನಿಮಾದಲ್ಲಿನ ಫ್ಲಾಷ್ ಬ್ಯಾಕ್‌ನಂತೆ ಕಾಲೇಜ್ ದಿನಗಳ

ಚಿತ್ರಣ ಅವನ ಚಿದಾಕಾಶವನ್ನು ಹಾಯ್ದು ಹೋಯಿತು. ಸುಚಿತ್ರಾ, ವೀರೆನ್‌ನ ಸಹಪಾಠಿ. ಅದಕ್ಕೂ ಹೆಚ್ಚಾಗಿ ಅವನ ಅವನ ಅತ್ಯಂತ ನಿಕಟವರ್ತಿ. ಮೂಟ್ಕೋರ್ಟ್‌ನಲ್ಲಿ ಭಾಗವಹಿಸಲು ಅಧಿಕಾರಿಗಳು ಅವರಿಬ್ಬರನ್ನೂ ಆಯ್ಕೆ ಮಾಡಿ ಅಮೆರಿಕೆಗೆ ಕಳಿಸಿದಾಗಿನಿಂದ ಅವರಲ್ಲಿ ಅನ್ಯೋನ್ಯತೆ ಬೆಳೆದು ಬಂದಿತ್ತು. ಕಾಲೇಜಿನ ನಾಟಕಗಳಲ್ಲಿ ಒಟ್ಟಿಗೆ ಪಾತ್ರವಹಿಸುತ್ತಿದ್ದುದು, ಫೆಸ್ಟ್ ಒಂದರಲ್ಲಿ ಇವರಿಬ್ಬರಿಗೆ ''ಮೇಡ್ ಫಾರ್ ಈಚ್ ಅದರ್'' ಬಹುಮಾನ ಬಂದದ್ದು, ಇವೆಲ್ಲಾ ಅವರ ನಡುವಣ ಸ್ನೇಹವನ್ನು ಬಾಳಸಂಗಾತಿಗಳಾಗುವ ಮಟ್ಟಕ್ಕೆ ತಂದದ್ದು ನಿಜ. ಆದರೆ ವೀರೆನ್‌ನ ಅಮೆರಿಕದ ಉನ್ನತ ವ್ಯಾಸಂಗದ ಪ್ರಸ್ತಾಪ ಬಂದಾಗ, ಇವನಿಗಾಗಿ ಅವಳು ಕಾಯುವುದು ವ್ಯಾವಹಾರಿಕವಾಗಿ ಸರಿಗಾಣದ್ದರಿಂದ ಪರಸ್ಪರ ಒಪ್ಪಿ ಅವರು ಬೇರೆಯಾಗಿದ್ದರು. ''What a fine girl! ಅವಳನ್ನು ಪುನಃ ಭೇಟಿಯಾಗಲೇಬೇಕು, ಕಸ್ನಾಹಿ ಕರೂನ್, ತಿಲ ಶೋಧ್ಲ ಪಾಯ್ಜೇ ಮಲ'' ಅಂದುಕೊಂಡ ಮರಾಠಿ ವೀರ, ವೀರೆನ್.

**ಒಂದು ಡಿನ್ನರ್**

ಸುಚಿತ್ರಾ, ಬೆಂಗಳೂರಿನ ಖೈಬರ್ ರೆಸ್ಟುರಾದಲ್ಲಿ ಸುಧೀರನೊಂದಿಗೆ ಕುಳಿತಿದ್ದಳು. ಊಟ ಮುಗಿದು ಅವರು ಡೆಸರ್ಟ್‌ಗೆ ಕಾಯುತ್ತಿದ್ದರು. ಅವರಿಬ್ಬರ ನಡುವೆ ಮಾತುಕತೆ ಅವ್ಯಾಹತವಾಗಿ ಸಾಗಿತ್ತು. ಸುಚಿತ್ರಾ ಹೇಳುತ್ತಿದ್ದಳು, ''ನಮ್ಮ ದೇಶದ ಎಲ್ಲಾ ಸಮಸ್ಯೆಗಳಿಗೂ, ನಮ್ಮ ಜಾತಿ ಪದ್ಧತೀನೇ ಕಾರಣ. ಅಮೆರಿಕಾ, ಇಂಗ್ಲೆಂಡುಗಳಲ್ಲಿ ಜನ ತಾವೆಲ್ಲಾ ಒಂದೇ ಜನಾಂಗ ಅಂತ ದುಡೀತಾರೆ. ಅದಕ್ಕೇ ಅವರೆಲ್ಲಾ ಅಷ್ಟು ಮುಂದುವರಿದಿರೋದು. ನಾವು ಮಾತ್ರ ಇಲ್ಲಿ ಆ ಜಾತಿ, ಈ ಜಾತಿ ಅಂತ ಕಚ್ಚಾಡ್ತಾ, ಒಬ್ಬರ ಮೇಲೆ ಇನ್ನೊಬ್ಬರನ್ನ ಎತ್ತಿ ಕಟ್ತಾ ಹಿಂದೇನೇ ಉಳಿದು ಬಿಟ್ಟಿದೀವಿ. ಯಾವಾಗ ವರ್ಣಾಶ್ರಮ ಧರ್ಮಾ ಅಂತ ಆರ್ಯರು ಸಮಾಜಾನ ಒಡೆಯುಕ್ಕೆ ಪ್ರಾರಂಭಿಸಿದ್ರೋ ಆವಾಗ್ಲೇ ಶುರು ಆಯ್ತು ನೋಡು ನಮ್ಮ ಪತನ. ಚಾತುರ್ವರ್ಣಂ ಮಯಾ ಸೃಷ್ಟಂ... ಅಂತೆಲ್ಲಾ ಹೇಳಿ ನಮ್ಮನ್ನೆಲ್ಲಾ ಈ ಪರಿಸ್ಥಿತೀಗೆ ನೂಕಿದ ಶ್ರೀ ಕೃಷ್ಣನೇ ಪ್ರೈಮ್ ಕಲ್ಪ್ರಿಟ್, ಏನಂತೀ ಸುಧೀರ್?''

ಸುಧೀರ್ ಏನನ್ನೂ ಹೇಳುವ ಸ್ಥಿತಿಯಲ್ಲಿರಲಿಲ್ಲ. ಸುಚಿತ್ರಾಳ ಮಾತಿನ ಉದ್ವೇಗ ಹೆಚ್ಚುತ್ತಿದ್ದಂತೆ ಅವಳ ಅಲಬಾಸ್ಟರ್ ಕಿವಿಗಳ ಮೇಲಿನ ಅಂಚು ತೆಳು ಕೆಂಪಾಗುವುದನ್ನೇ ಕುತೂಹಲದಿಂದ ನೋಡುತ್ತಿದ್ದ ಸುಧೀರನ ಮನ ಅನೇಕ ಜ್ವಲಂತ ಪ್ರಶ್ನೆಗಳೊಂದಿಗೆ ಸೆಣೆಸಾಡುತ್ತಿತ್ತು. ಈ ನವ ವರ್ಷಾರಂಭದಂದು ಈ ಅಪ್ಸರೆಯೊಡನೆ ಕುಳಿತು ಹರಟುವ ಈ ಸೌಭಾಗ್ಯ ನನ್ನದಾಗಲು ನಾನೇನು ಪುಣ್ಯಮಾಡಿದ್ದೆ? ಎಂಬ ಪ್ರಶ್ನೆ, ಕಳೆದ ವರ್ಷದುದ್ದಕ್ಕೂ ಸುಚಿತ್ರಾಳೊಂದಿಗಿನ

ಒಡನಾಟ ಈಗಲಾದರೂ ಗುರಿಮುಟ್ಟಿ ಅವಳು ತನ್ನ ಬಾಳಸಖಿಯಾಗಲು ಒಪ್ಪೀಯಾಳೇ ಎಂಬ ತವಕ, ಆ ಕ್ರೂಷಿಯಲ್ ಪ್ರಶ್ನೆಯನ್ನು ಕೇಳಲು ಯಾವುದು ಪ್ರಶಸ್ತ ಸಮಯ? ಎಂಬ ಪ್ರಾಕ್ಟಿಕಲ್ ತೊಳಲಾಟ, ಓಸ್ನಲೆಯಲ್ಲಿ, ಚಳಿಗಾಲದ ಅಗ್ಗಿಷ್ಟಿಕೆಯಂತೆ, ಕಾವು ಕೊಟ್ಟು ಅವನ ಮನವನ್ನು ಬೆಚ್ಚಗಿಟ್ಟಿದ್ದ ಸುಚಿತ್ರಾಳ ಮಧುರ ಸಾಮೀಪ್ಯ, ಇವುಗಳ ಗಲಾಟೆಯಲ್ಲಿ ಸುಧೀರ್ ಏನನ್ನು ತಾನೇ ಹೇಳೀಯಾನು!

''ಸುಧೀರ್, ಏನು ಯೋಚಿಸ್ತಾ ಇದ್ದೀ? ನಾನು ನಿನ್ನನ್ನೇ ಕೇಳಿದ್ದು'' ಸುಚಿತ್ರಾಳ ಕೋಕಿಲ ಕಂಠ ಸುಧೀರನನ್ನು ಹಠಾತ್ತನೆ ಖೈಬರ್‌ಗೆ ತಂದಿಳಿಸಿತು.

''ಖಂಡಿತ, I fully agree. ಶ್ರೀಕೃಷ್ಣನೇ ಪ್ರೈಮ್ ಕಲ್ಪ್ರಿಟ್. ಜೈಲಿನಲ್ಲಿ ಹುಟ್ಟಿದೋನು ಇನ್ನೇನಾಗಿರುಕ್ಕೆ ಸಾಧ್ಯ?'' ಸುಧೀರನ ರೆಸ್ಪಾನ್ಸ್ ಕೇಳಿ ಸುಚಿತ್ರಳ ತುಟಿಯಂಚಿನಲ್ಲಿ ಮೆಲುನಗೆ ಮೂಡಿತು. "You really *are* hopless!" ಅಂದಳು ಸುಚಿತ್ರಾ.

ಸುಧೀರ್ ಒಬ್ಬ Y2K ಮಿಲಿಯನಿಯರ್. ಅವನ ಸಾಫ್ಟ್‌ವೇರ್ ಸಂಸ್ಥೆ ದೇಶಾದ್ಯಂತ Y2K ಸಮಸ್ಯೆಗಳಿಗೆ ಪರಿಹಾರ ಹೊಂದಿಸಿ ಹೇರಳವಾಗಿ ಹಣ ಗಳಿಸಿತ್ತು. ಕಳೆದ ವರ್ಷದ (Bless its soul!) ಕೊನೆಯ ಭಾಗದಲ್ಲಿ ಮುಂಬೈನ ಒಂದು ಹಿರಿಯ ಸಂಸ್ಥೆಯ ಕಂಪ್ಯೂಟರುಗಳ ನೆಟ್‌ವರ್ಕ್ ಅನ್ನು Y2K ಕಂಪ್ಲಯಂಟ್ ಆಗಿ ಮಾಡಿ ಅದೊಂದು ಕೆಲಸದಿಂದಲೇ ಎಂಭತ್ತು ಲಕ್ಷ ಗಳಿಸಿತ್ತು ಅವನ ಸಂಸ್ಥೆ. ಹೀಗೊಂದು ಸುಭದ್ರವಾದ ಬಾಳದೋಣಿಯೊಂದನ್ನು ಕಟ್ಟಿಯಾದಮೇಲೆ, ಅದರಲ್ಲಿ ಸಂಗಾತಿಯೊಬ್ಬಳೊಡನೆ ಯಾನ ಮಾಡುವ ಸುಧೀರನ ಉತ್ಕಟೇಚ್ಛೆ ತಪ್ಪು ಎಂದು ಯಾರು ತಾನೇ ಹೇಳೀಯಾರು?

ಬೇರರ್ ಎರಡು ಬಟರ್ ಸ್ಕಾಚ್ ಐಸ್‌ಕ್ರೀಮ್‌ಗಳನ್ನು ತಂದಿಟ್ಟ. ಅಂದು ಹೋಟೆಲಿನ ಛೆಫ್, ಉದಾರ ಮನೋಭಾವದಲ್ಲಿದ್ದನೆಂದು ತೋರುತ್ತದೆ. ಐಸ್‌ಕ್ರೀಮ್ ಗಾಜಿನ ಬಟ್ಟಲಿನ ಅಂಚನ್ನು ಮೀರಿ ಉಕ್ಕಿ ಹರಿದಿತ್ತು. ""Cup of joy" ಎಂದರೆ ಇದೇ ಇರಬಹುದೇನೋ, ಈ ಐಸ್ ಕ್ರೀಮಿನ ತರಹಾನೇ ನನ್ನ ಸಂತಸದ ಬಟ್ಟಲೂ ಸಹಾ ಉಕ್ಕಿ ಹರಿಯುತ್ತಿದೆಯಲ್ಲಾ'' ಎಂದುಕೊಂಡ ಭಾವನಾಜೀವಿ ಸುಧೀರ್.

**ಉರುಳಿದ ಬಟ್ಟಲು**

ಅಂದು ಮುಂಜಾನೆ ವಿಧಿ, ತನ್ನ ಗೆಳೆಯರೊಂದಿಗೆ ವಾಯುವಿಹಾರಕ್ಕೆ ಹೊರಟಿತ್ತು. ಉಕ್ಕಿ ಹರಿಯುತ್ತಿದ್ದ ಸಂತಸದ ಬಟ್ಟಲುಗಳನ್ನು ಒದ್ದು ಉರುಳಿಸುವುದು, ವಿಧಿ ಮತ್ತು ಮಿತ್ರರಿಗೆ ಅತಿ ಪ್ರಿಯವಾದ ಆಟ. ಮುಂದೆ

ಸಾಗುತ್ತಿದ್ದ ವಿಧಿಗೆ ಸುಧೀರನ ಸಂತಸದ ಬಟ್ಟಲು ಕಾಣಿಸಿತು. ಬಹು ಸಂಭ್ರಮದಿಂದ ಓಡಿಹೋಗಿ ವಿಧಿ ಆ ಬಟ್ಟಲಿಗೆ ಒಂದು ರನ್ನಿಂಗ್ ಕಿಕ್ ಕೊಟ್ಟಿತು. ಗೆಳೆಯರೆಲ್ಲಾ ಹೋ ಎಂದು ನಗುತ್ತಾ ಹುಯಿಲೆಬ್ಬಿಸಿದರು. ಬಟ್ಟಲು, ಹುಚ್ಚೆದ್ದ ಕುದುರೆಯಂತೆ ಒಮ್ಮೆಲೇ ಮೇಲೆದ್ದು, ನಂತರ ನೆಲಕ್ಕೆ ಬಿದ್ದು, ಉರುಳುತ್ತಾ, ಉರುಳುತ್ತಾ ಮುಂದೆ ಸಾಗಿ, ನೋಡು ನೋಡುತ್ತಿದ್ದಂತೆ ಲೀಗಲ್ ನೋಟೀಸಿನ ರೂಪದಳೆದು ಸುಧೀರನ ಮೇಜಿನ ಮೇಲೆ ಬಂದು ಬಿದ್ದಿತು. ಸುಧೀರ್ ಲಕ್ಕೋಟೆಯನ್ನು ಒಡೆದು ಒಳಗಿನ ಪತ್ರ ಓದಿದ. ವಾಗ್ಮೋಡೆ ಮತ್ತು ವಾಗ್ಮೋಡೆ, ಸಾಲಿಸಿಟರ್ಸ್, ಅವರ ಲೆಟರ್ ಹೆಡ್‌ನಲ್ಲಿದ್ದ ಲೀಗಲ್ ನೋಟೀಸ್ ಅದು. ''ನಮ್ಮ ಕಕ್ಷಿಗಾರ ಸಂಸ್ಥೆಗೆ ನೀವು ಸರಬರಾಜು ಮಾಡಿದ್ದ Y2K ಸಮಸ್ಯೆಯನ್ನು ಪರಿಹರಿಸುವ ಸಾಫ್ಟ್‌ವೇರ್ ಸರಿಯಾಗಿ ಕೆಲಸಮಾಡದೇ, ಹೊಸ ವರ್ಷಾರಂಭದ ಮೊದಲ ಸೆಕೆಂಡ್‌ನಲ್ಲಿಯೇ ನಮ್ಮ ಕಂಪ್ಯೂಟರುಗಳೆಲ್ಲಾ ಕ್ರಾಷ್ ಆಗಿವೆ. ಇದು ಬ್ರೀಚ್ ಆಫ್ ಕಾಂಟ್ರಾಕ್ಟ್ ಆಗಿರುವುದರಿಂದ ನಾವು ನಿಮಗೆ ಕೊಟ್ಟ ಹಣವನ್ನು ಬಡ್ಡಿಸಹಿತ ಹಿಂತಿರುಗಿಸುವುದು.''

ನೋಟೀಸನ್ನು ನೋಡಿದ ತಕ್ಷಣ ಸುಧೀರನಿಗೆ ಮೊದಲು ನೆನಪಾದ ವ್ಯಕ್ತಿಯೆಂದರೆ ಸುಚಿತ್ರಾ. ಸರಿ, ಷಾ ಮತ್ತು ಷಾ ಅಟಾರ್ನೀಸ್, ಅವರಿಗೆ ಫೋನ್ ಮಾಡಿ, ''ಕನೆಕ್ಟ್ ಮಿ ಟು ಮಿಸ್ ರಾವ್'' ಅಂತ ಕೇಳಿ ಸುಚಿತ್ರಾ ಲೈನ್‌ಗೆ ಬಂದಮೇಲೆ ಅವಳಿಗೆ ವಿಷಯ ತಿಳಿಸಿದ. ಸುಚಿತ್ರಾ, ತನ್ನ ಎಲ್ಲ ಕುಲಬಾಂಧವರಂತೆ ''ಡೋಂಟ್ ವರಿ ಸುಧೀರ್'' ಎಂದು ಪ್ರಾರಂಭಿಸಿ, ''ನೋಟೀಸನ್ನು ನನಗೆ ಫ್ಯಾಕ್ಸ್ ಮಾಡಿಬಿಡು. ನಾನು ನಿಧಾನವಾಗಿ ಅದನ್ನ ಸ್ಟಡಿ ಮಾಡಿ ನಮ್ಮ ಉತ್ತರ ಡ್ರಾಫ್ಟ್ ಮಾಡಿರುತ್ತೇನೆ. ನಾಳೆ ನೀನು ನಮ್ಮ ಆಫೀಸಿಗೆ ಬಂದರೆ ಮಿಕ್ಕ ಕೆಲಸ ಮಾಡಬಹುದು, ಬೈ, ಟೇಕ್ ಕೇರ್'' ಅಂದು ಫೋನನ್ನು ಕೆಳಗಿಟ್ಟು, ''ಗಫೂರ್, ಏಕ್ ಟೀ ಲಾವ್'' ಎಂದು ಗಫೂರನಿಗೆ ಆಣತಿಯಿತ್ತಳು.

ಷಾ ಮತ್ತು ಷಾ

ಬಾಬೂಭಾಯ್ ದಾಮೋದರ್ ಷಾ ವಕೀಲಿ ವೃತ್ತಿ ನಡೆಸಲು ಬೆಂಗಳೂರಿಗೆ ಬಂದು ಹತ್ತು ವರುಷಗಳ ಮೇಲಾಗಿತ್ತು. ಬಂದ ಎರಡು ವರ್ಷಗಳಲ್ಲೇ ಅವನ ಸಹೋದರ ಕುನಾಲ್ ಕೂಡ ಅಣ್ಣನ ಫ್ಲರಿಷಿಂಗ್ ವಕೀಲಿ ವೃತ್ತಿಯನ್ನು ಸೇರಿಕೊಂಡ. ತಮ್ಮ ಕಛೇರಿಯ ಮುಂದೆ ಬಿ.ಡಿ.ಷಾ ಮತ್ತು ಕೆ.ಡಿ.ಷಾ, ಅಟಾರ್ನೀಸ್ ಎಂದು ಬರೆಸಿದ್ದ ಫಲಕವನ್ನು ನೋಡಿದ ಕನ್ನಡ ಬಲ್ಲ ಹಿತೈಷಿಗಳೊಬ್ಬರು ಆ ಫಲಕವನ್ನು ಬದಲಿಸುವಂತೆ ಸೂಚನೆ ನೀಡಿದಾಗಿನಿಂದ ಅವರ ಸಂಸ್ಥೆ, ಕೇವಲ ಷಾ ಮತ್ತು ಷಾ ಅಟಾರ್ನೀಸ್ ಆಗಿತ್ತು. ಸುಚಿತ್ರಾ ಈ

ಸಂಸ್ಥೆಗೆ ಸೇರಿದ ಎರಡು ವರ್ಷಗಳಲ್ಲೇ ಷಾ ಸಹೋದರರ ಕಣ್ಮಣಿಯಾಗಿದ್ದಕ್ಕೆ ಮುಖ್ಯ ಕಾರಣ ಅವಳ ಅನ್ ಬ್ಲೆಮಿಷ್ಟ್ ಟ್ರಾಕ್ ರೆಕಾರ್ಡ್. ಅವಳು ಹಿಡಿದು ವಾದಮಾಡಿದ ಹತ್ತೊಂಭತ್ತು ಕೇಸುಗಳಲ್ಲಿ, ಹದಿನೈದು ಕೇಸುಗಳನ್ನು ಅವಳು ಗೆದ್ದು, ಮಿಕ್ಕ ನಾಲ್ಕರಲ್ಲಿ ನಾಲ್ಕನ್ನೂ ಕೋರ್ಟಿನಾಚೆ ರಾಜಿ ಮಾಡಿಸಿದ್ದನ್ನು ಬಾಬೂಭಾಯ್, ಅವಳ ಸಹೋದ್ಯೋಗಿ ಲಾಯರುಗಳ ಮುಂದೆಯೇ ಹೊಗಳಿ ಹಾಡುತ್ತಿದ್ದ. ಅದರಿಂದ ಸಹಜವಾಗಿಯೇ ಅವಳ ಸಹೋದ್ಯೋಗಿಗಳಿಗೆ ಅವಳ ಮೇಲೆ ಅಸೂಯೆ ಮೂಡಿತೆಂದು ನೀವು ತಿಳಿದರೆ ಆ ಮಾತು ಸತ್ಯಕ್ಕೆ ಬಹು ದೂರವಾದೀತು. ನಿಜ ಹೇಳಬೇಕೆಂದರೆ ಸುಚಿತ್ರಳ ನಗುಮುಖ, ಸಜ್ಜನಿಕೆ, ಹಾಸ್ಯಪ್ರಜ್ಞೆ ಹಾಗೂ ಸ್ನೇಹಪರತೆಯ ಕಾವಿನಲ್ಲಿ ಎಂತಹ ಅಸೂಯೆಯೂ ಕರಗಿ ಹೋಗುತ್ತಿತ್ತು.

ಸುಧೀರ್ ಆಫೀಸಿಗೆ ಬಂದು ಸುಚಿತ್ರಾಳ ಮುಂದೆ ಕುಳಿತಾಗ, ಅವಳು "Good News ಸುಧೀರ್, You won't believe when I tell you this. ನಿನಗೆ ನೋಟೀಸ್ ಕಳಿಸಿದಾನಲ್ಲಾ ಅವನು ಯಾರು ಗೊತ್ತೇ?" ಎಂದು ಹೇಳಿ effect ಗೋಸ್ಕರ pause ಮಾಡಿದಳು.

"ಯಾವನೋ ಮನೆಹಾಳ, ಯಾರಾದರೆ ನನಗೇನು? ಈಗ ಅವನಿಗೆ ಏನು ಉತ್ತರ ಬರೆಯೋಣ?"

ಸುಧೀರನ ಕಾಮೆಂಟ್ ಸುಚಿತ್ರಾಳ ಕಿವಿಗೆ ಬಿದ್ದಂತೆ ಕಾಣಲಿಲ್ಲ.

"ವೀರೆನ್ ವಾಗ್ಮೋಡೆ, ನ್ಯಾಷನಲ್ ಲಾ ಸ್ಕೂಲಿನಲ್ಲಿ ನನ್ನ ಸಹಪಾಠಿ ಆಗಿದ್ದ. ನೋಟೀಸ್ ನೋಡಿದ ತಕ್ಷಣಾನೇ ಅವನಿಗೆ STD ಮಾಡಿ ಮಾತನಾಡಿದೆ. ನೋಟೀಸಿಗೆ ಉತ್ತರ ಬರೆಯೋ ತೊಂದರೇನೇ ಬೇಡ. ನಿನ್ನ ಕ್ಲೈಂಟ್ ಅನ್ನ ಕರೆದುಕೊಂಡು ಇಲ್ಲಿಗೇ ಬಂದುಬಿಡು. ಏನಾದರೊಂದು ಕಾಂಪ್ರೊಮೈಸ್ ಮಾಡೋಣ. Where there is a will... ಅಂತ ಅವನು ಅನ್ನುವಷ್ಟರಲ್ಲಿ, ನಾನು there are ten claimants ಅಂತ ಸೇರಿಸಿ ಅವನನ್ನ ನಗಿಸಿದೆ. ನಾಳೆಗೇ ಎರಡು ಏರ್‌ಟಿಕೆಟ್‌ಗಳನ್ನ ಬುಕ್ ಮಾಡಿಬಿಡು. ಬೆಳಗ್ಗೆ ಹೋಗಿ ಸಂಜೆ ಕೊನೆಯ ಫ್ಲೈಟ್‌ಗೆ ಬೆಂಗಳೂರಿಗೆ ಹಿಂತಿರುಗಿದರಾಯಿತು." ಸುಚಿತ್ರಳ ದನಿಯಲ್ಲಿ ಜಯವನ್ನು ಸಾಧಿಸಿದ ಸಂತಸವಿತ್ತು. ಎಂಭತ್ತು ಲಕ್ಷದ ಸಮಸ್ಯೆ ಸುಲಭವಾಗಿ ಪರಿಹಾರವಾಗುವ ಸಂಭವ ಸಹಜವಾಗಿಯೇ ಮೂಡಿಸಬೇಕಾಗಿದ್ದ ಸಂತಸ ಯಾವುದೋ ಅವ್ಯಕ್ತ ಕಾರಣದಿಂದ ಸುಧೀರನ ಹೃದಯದಲ್ಲಿ ಮೂಡಲಿಲ್ಲ.

ಮುಂಬೈ

ಸುಧೀರ್ ಮತ್ತು ಸುಚಿತ್ರಾ, ವೀರೇನ್‌ನ ಆಫೀಸಿಗೆ ಕಾಲಿಟ್ಟಂದಿನಿಂದಲೇ ಅವರಿಗೆ ಕೆಂಪು ರತ್ನಗಂಬಳಿ ಉಪಚಾರ ಸಿಕ್ಕಿತ್ತು. ಸೌಜನ್ಯವೇ ಮೂರ್ತಿವೆತ್ತಂತಿದ್ದ ವೀರೆನ್, ಅವರು ಮುಂಬೈ ತಲುಪುವ ಹೊತ್ತಿಗಾಗಲೇ, ತನ್ನ ಕಕ್ಷಿಗಾರ ಸಂಸ್ಥೆಯೊಂದಿಗೆ ಮಾತನಾಡಿ ಸುಚಿತ್ರ ಸೂಚಿಸಿದ್ದ ಇಪ್ಪತ್ತು ಲಕ್ಷ ಕಾಂಪ್ರೊಮೈಸ್ ಮೊತ್ತಕ್ಕೆ ಅವರನ್ನು ಒಪ್ಪಿಸಿದ್ದ. ಇದೆಲ್ಲಾ ಕೇಳಿ ಕುಪ್ಪಳಿಸಿ ಕುಣಿಯಬೇಕಾಗಿದ್ದ ಸುಧೀರನ ಹೃದಯ, ಹಾಗೇನೂ ಮಾಡದೆ ಮೊಂಡುತನದಿಂದ ಸಂಪು ಹೂಡಿತ್ತು. ಅಂದು ಬೆಳಿಗ್ಗೆ ವೀರೆನ್ ಏರ್ ಪೋರ್ಟಿಗೆ ಬಂದು ಅವರಿಬ್ಬರನ್ನೂ ತನ್ನ ಸಿಯೆಲ್ಲೋ ಕಾರಿನಲ್ಲಿ ಕೂರಿಸಿಕೊಂಡಿದ್ದು, ಅತ್ಯಂತ ಸಹಜವೋ ಎಂಬಂತೆ ಸುಚಿತ್ರಾ ಮುಂದಿನ ಸೀಟಿನಲ್ಲಿ ವೀರೆನ್‌ನ ಪಕ್ಕ ಕುಳಿತದ್ದು, ಮಾತು ಮಾತಿಗೆ ಅವರಿಬ್ಬರಿಂದ ಹೊರಹೊಮ್ಮುತ್ತಿದ್ದ ಕಿಲಕಿಲ ನಗು, ಹಸಿದ ಬಡಪಾಯಿ ನಾಯಿಗೆ ಕರುಣೆಯಿಂದ ಒಂದೆರಡು ಎಂಜಲು ಎಲುಬುಚೂರು ಎಸೆಯುವಂತೆ, ಹಿಂದಿನ ಸೀಟಿನಲ್ಲಿ ಸೆಟೆದು ಕುಳಿತಿದ್ದ ಸುಧೀರನೆಡೆಗೆ ಹತ್ತು ಮಾತಿಗೊಮ್ಮೆ ಅವರು ಒಂದೆರಡು ಸೌಜನ್ಯದ ಮಾತುಗಳ ತುಣುಕುಗಳನ್ನೆಸೆಯುತ್ತಿದ್ದುದು, ಇವುಗಳೆಲ್ಲದರ ಒಟ್ಟು ಪರಿಣಾಮದಿಂದ ಸುಧೀರನ ರಕ್ತ ಕುದಿಯುವ ಬಿಂದುವನ್ನು ಸಮೀಪಿಸಿತ್ತು.

ವೀರೆನ್ ಹೇಳುತ್ತಿದ್ದ.

''ಕಂಗ್ರ್ಯಾಜುಲೇಷನ್ಸ್ ಸುಧೀರ್. ನೀವು ಬಂದ ಕೆಲಸವಾಯಿತಲ್ಲಾ. ಸುಚಿ, ನಿನ್ನ ಕ್ಲೈಂಟ್‌ಗೆ ಇಷ್ಟೆಲ್ಲಾ ಸಹಾಯ ಮಾಡಿದ್ದಕ್ಕೆ You owe me a luncheon date. ನನ್ನ ಮಿಕ್ಕ ಕೆಲಸಗಳನ್ನ ಮುಗಿಸಿ ಒಂದು ಘಂಟೆಗೆ ನಿನ್ನನ್ನ ಹೋಟೆಲಿನಿಂದ ಪಿಕಪ್ ಮಾಡುತ್ತೇನೆ. ಸುಧೀರ್ ನೀವೂ ಬರುತ್ತೀರ ತಾನೇ?''

"You need my company like a hole in the head" ಅಂತ ಸ್ವಗತವಾಗಿ ಅಂದುಕೊಳ್ಳುತ್ತಾ ಸುಧೀರ್, ''ಇಲ್ಲ ವೀರೆನ್ ಸಾಬ್, ನನಗೆ ಬೇರೆ ಕೆಲಸವಿದೆ. But thanks for the invitation'' ಎಂದು ಔಪಚಾರಿಕವಾಗಿ ಹೇಳಿ ಎದ್ದ. ಅವನ ಹೃದಯ ಸುಚಿ, My foot ಎಂದು ವೀರೆನ್‌ನ ಮಾತಿಗೆ ಮಾರ್ನುಡಿಯಿತು. ಎಲ್ಲರೂ ಪರಸ್ಪರ ವಿದಾಯ ಹೇಳಿ ಮೀಟಿಂಗಿನಿಂದ ಎದ್ದು ಹೊರಗೆ ಹೊರಟರು. ಸುಧೀರ್, ಸುಚಿತ್ರಾ ಹೊರಗೆ ಬಂದು ಟ್ಯಾಕ್ಸಿಯಲ್ಲಿ ಕುಳಿತೊಡನೆಯೇ, ಸುಧೀರ್ ಏನನ್ನೋ ನೆನಪಿಸಿಕೊಂಡವನಂತೆ ಟ್ಯಾಕ್ಸಿಯಿಂದ ಇಳಿದು, ''ಒಂದ್ನಿಮಿಷ ಸುಚಿ, ಈಗಲೇ ಬಂದೆ'' ಎಂದು ಹೇಳಿ ವೀರೆನ್‌ನ ಆಫೀಸಿಗೆ ಪುನಃ ಓಡಿಹೋದ. ವೀರೆನ್ ''ಏನಾಯ್ತು ಸುಧೀರ್, ಏನನ್ನಾದರೂ

ಮರೆತಿರಾ ಹೇಗೆ?'' ಎಂದಾಗ ಸುಧೀರ್ ಅತ್ಯಂತ ನಯವಾಗಿ, ''ವೀರೆನ್ ಸಾಬ್, ನೀವು ಇಂದು ನನ್ನ ಪ್ರಾಣ ಉಳಿಸಿದಿರಿ. ನಿಮ್ಮ ಉಪಕಾರ ಹಣ ಕೊಟ್ಟು ತೀರಿಸುವಂತಹುದಲ್ಲ. ಅದಕ್ಕೆ ನಿಮಗೆ ಅತ್ಯಂತ ಉಪಯೋಗವಾಗಬಹುದಾದ ಒಂದು ಮಾಹಿತಿಯನ್ನ ಕೊಟ್ಟುಹೋಗಲು ಬಂದೆ. ಹೇಗಿದ್ದರೂ ಇದು ಮಾಹಿತಿ ಯುಗ ಅಲ್ಲವೇ. ಈ ಚೀಟಿಯನ್ನು ಸಾವಧಾನವಾಗಿ ಓದಿ. ಆಮೇಲೆ ಇದನ್ನ ಉಪಯೋಗಿಸಿಕೊಳ್ಳುವುದೂ, ಬಿಡುವುದೂ, ನಿಮಗೆ ಬಿಟ್ಟಿದ್ದು, ಬೈ ವೀರೆನ್ ಸಾಬ್'' ಅಂತ ಹೇಳಿ ಟ್ರ್ಯಾಕ್ಸಿಗೆ ಹಿಂತಿರುಗಿದ.

ಸುಧೀರ್ ಆಚೆಹೋದ ಮೇಲೆ ವೀರೆನ್ ಸುಧೀರ್ ಕೊಟ್ಟ ಚೀಟಿಯನ್ನು ಬಿಡಿಸಿ ನೋಡಿದ. ಅದರಲ್ಲೊಂದು ವಿಚಿತ್ರವಾದ ಸಂದೇಶವಿತ್ತು. ''ಸುಚಿತ್ರಾಗೆ ಶ್ರೀಕೃಷ್ಣನ ಮೇಲೆ ಬಹು ಪ್ರೀತಿ. ಭಗವದ್ಗೀತೆಯೆಂದರೆ ಅದರಲ್ಲೂ ನಾಲ್ಕನೆಯ ಅಧ್ಯಾಯವೆಂದರೆ ಪ್ರಾಣ. ಯಾವ ಕಾರಣಕ್ಕೂ ಇವೆರಡನ್ನು ತೆಗಳಬೇಡ. ಹೊಗಳುವುದು ಲಾಭದಾಯಕ'' ಒಂದು ಕ್ಷಣದಲ್ಲಿ ವೀರೆನ್‌ನಿಗೆ ಸಂದೇಶ ಅರ್ಥವಾಯಿತು. ನಿಜಕ್ಕೂ ಸುಧೀರನಂತಹ ಮಿತ್ರರಿದ್ದರೆ ಭೂಲೋಕ ಸ್ವರ್ಗ ಸದೃಶ ಅಂದುಕೊಂಡ ವೀರೆನ್.

**ಬಂದ ದಾರಿ**

''ಇನ್ನು ಕೆಲವೇ ನಿಮಿಷಗಳಲ್ಲಿ ನಮ್ಮ ವಿಮಾನ ಬೆಂಗಳೂರಿನಲ್ಲಿ ಇಳಿಯಲಿದೆ. ದಯವಿಟ್ಟು ಭದ್ರತಾ ಪಟ್ಟಿಗಳನ್ನು ಬಿಗಿಪಡಿಸಿಕೊಳ್ಳಿ'' ಎಂದು ಗಗನ ಸಖಿ ಹೇಳುತ್ತಿದ್ದಳು. ವಿಮಾನಯಾನದಲ್ಲಿ ಮುಂಬೈನಿಂದ ಇಲ್ಲಿಯವರೆಗೆ ಸುಚಿತ್ರಾ ಮೌನ ವ್ರತ ವಹಿಸಿದಂತಿತ್ತು. ವೀರೆನ್‌ನೊಡನೆ ಮಧ್ಯಾಹ್ನ ಊಟಕ್ಕೆ ಹೋಗಿ ಹೋಟೆಲಿಗೆ ಹಿಂತಿರುಗಿದ ನಂತರ ಸುಚಿತ್ರಾ ಆ ಕುರಿತು ಸುಧೀರನೊಂದಿಗೆ ಯಾವ ಪ್ರಸ್ತಾಪವನ್ನೂ ಮಾಡಿರಲಿಲ್ಲ. ಸುಧೀರ್ ಈ ಪರಿಣಾಮವನ್ನು ಸುಮಾರಾಗಿ ಊಹಿಸಿದ್ದರಿಂದ ಅವಳನ್ನು ಕೆಣಕದೇ ತನ್ನ ಚಿಂತೆಗಳಲ್ಲೇ ಸುಖವಾಗಿ ಮುಳುಗಿದ್ದ. ಒಮ್ಮಲೇ ಸುಚಿತ್ರಾ ತನ್ನ ಮೌನವನ್ನು ಮುರಿದಳು. ''ಸುಧೀರ್, ಈ ವಿಷಯವನ್ನ ನಾನು ನಿನಗೆ ಹೇಗೆ ಹೇಳಬೇಕೋ ತಿಳಿಯದಾಗಿದೆ. ಆದರೂ ಧೈರ್ಯವಹಿಸಿ ಹೇಳಿಬಿಡುತ್ತಿದ್ದೇನೆ. ಇಂದು ಮಧ್ಯಾಹ್ನ ವೀರೆನ್ ನನ್ನನ್ನು Luncheon Dateಗೆ ಕರೆದೊಯ್ದದ್ದು ನಿನಗೆ ನೆನಪಿರಬಹುದು. ಅಲ್ಲಿ ವೀರೆನ್‌ನೊಂದಿಗೆ ಮಾತನಾಡುತ್ತಿದ್ದಾಗ ಭಗವದ್ಗೀತೆಯ ಪ್ರಸ್ತಾಪ ಬಂತು. ಗೀತೆಯ ಮೇಲೆ ನನಗೆ ಎಷ್ಟು ತಪ್ಪು ಅಭಿಪ್ರಾಯಗಳಿದ್ದವು ಎಂಬ ಅಂಶ ವೀರೇನ್‌ನ ಮಾತು ಕೇಳಿದ ಮೇಲೆಯೇ ನನಗೆ ತಿಳಿದದ್ದು. ನಿಜಕ್ಕೂ ಇಂದು ವೀರೆನ್ ನನ್ನ ಕಣ್ಣು ತೆರೆಸಿದ. ಅಬ್ಬ ಅವನ ತಿಳುವಳಿಕೆ ಎಷ್ಟು ಅಗಾಧ!

ಅವನೊಡನೆ ಮಾತನಾಡುತ್ತಾ ಸಮಯ ಸರಿದದ್ದೇ ತಿಳಿಯಲಿಲ್ಲ. I suddenly realise that I desperately need his intellectual companionship ಸುಧೀರ್. ಅದಕ್ಕೆ ಅವನು ಇಂದು ನನಗೆ propose ಮಾಡಿದಾಗ ನಾನು ಅವನ ಬಾಳಸಂಗಾತಿಯಾಗಲು ಒಪ್ಪಿದೆ. ನಿನಗೆ ಇದರಿಂದ ಬೇಸರವಾಗುತ್ತದೆಂದು ನನಗೆ ತಿಳಿದಿದೆ. ಆದರೆ ಖಂಡಿತ ನೀನು ಈ ಬೇಸರವನ್ನು ಮೀರಿ ಬಾಳಬಲ್ಲೆ. We can always be good friends."

ವಿಮಾನ ಧರೆಗಿಳಿದು ನಿಂತಿತು. "ನಾವು ಈಗ ಬೆಂಗಳೂರನ್ನು ತಲುಪಿದ್ದೇವೆ. ನಮ್ಮೊಡನೆ ಪ್ರಯಾಣ ಮಾಡಿದ್ದಕ್ಕಾಗಿ ನಿಮಗೆ..... " ಗಗನಸಖಿಯ ಮಾತುಗಳು ಸುಧೀರನ ಪಾಲಿಗೆ ಕೇವಲ ಶಬ್ದಗಳಾಗಿದ್ದವು.

**ಉಪಸಂಹಾರ**

ಸುಧೀರ್ ಕಬ್ಬನ್ ಪಾರ್ಕಿನಲ್ಲಿ ಕುಳಿತಿದ್ದ. ಅವನ ಕೈಯಲ್ಲಿ ಒಂದು ಪುಸ್ತಕ. ಸಂಸ್ಕೃತದ ನಿದ್ರಾದರ್ಪಣದಿಂದ ಆಯ್ದ ಒಂದು ಕವನದ ಭಾಗದ ಇಂಗ್ಲೀಷ್ ಅವತರಣಿಕೆ ಆ ಪುಸ್ತಕದಲ್ಲಿತ್ತು. ಸ್ತ್ರೀ ಹೃದಯದ ವರ್ಣನೆ ಅದು. ಸುಧೀರ್ ಆ ಪುಟವನ್ನೇ ತದೇಕ ಚಿತ್ತದಿಂದ ನೋಡುತ್ತಿದ್ದ.

Mix, with sunset's fleeting glow,
Kiss of friend and stab of foe,
Ooze of moon and foam of brine,
Noose of thug, and creeper's twine,
Hottest flame and coldest ash,
Priceless Gems, and poorest trash:
Throw away the solid part,
And behold - a woman's heart!

ನಾಡಗೀತೆ

ಕನ್ನಡದ ಮಕ್ಕಳೆಲ್ಲ
ಒಂದಾಗಿ ಬನ್ನಿ
ನಲಿವಿನಿಂದ ಒಲವಿನಿಂದ
ತಮಿಳು ಕಲಿಯ ಬನ್ನಿ

– ಶೀನೂ

ಕೊರವಂಜಿಯ ಪುಟಗಳಿಂದ:

# ಫಣಿಯಪ್ಪನ ಹುಲಿಗಳು

**ಟೀಯೆಸ್ಸಾರ್ರಾವ್**

ನಮ್ಮೂರಿನ ಸುಪ್ರಸಿದ್ಧ ಷಿಕಾರಿ Fearless ಫಣಿಯಪ್ಪನನ್ನು ಆ ದಿನ ಏನು ಮಾಡಿದರೂ ತಪ್ಪಿಸಿಕೊಳ್ಳಲಾಗಲಿಲ್ಲ ರೈಲಿನಲ್ಲಿ. ಏಕೆಂದರೆ ಬೇರೆ ಡಬ್ಬಿಗಳಲ್ಲಿ 'ಬಾಗಿಲು ಯಾವುದು' ಅಂತ ಪತ್ತೆಯಾಗದಂತೆ ಜನ ಮುತ್ತಿಕೊಂಡಿದ್ದರು. ಈತ ನಮ್ಮ ಕಡೆ ಕಾಡಿನ ಖಗಮೃಗಗಳನ್ನು ಹೊಡೆದಿರುವುದಕ್ಕಿಂತ 'ಹೊಡೆದಿರುವೆ'ನೆಂದು ಹೇಳಿಕೊಳ್ಳುವ ಕತೆಗಳೇ ಹೆಚ್ಚು, ಹಾಗೂ ಸ್ವಾರಸ್ಯ ಎನ್ನುವುದನ್ನು ಎಲ್ಲರೂ ಬಲ್ಲರು.

'ಈಗಲೋ, ಆಗಲೋ ಈತನ ಸಂಭಾಷಣೆಗೆ ತುತ್ತಾಗಬೇಕಲ್ಲಾ' ಎಂದು ನಾಲ್ಕು ಜನ ಮೊಸರಿನವರ ಮಧ್ಯೆ ಸಿಕ್ಕಿಕೊಂಡು, ದೋಸೆ ಮಧ್ಯದ ಚಟ್ನಿಯಾಗಿ, ಮುದುರಿಕೊಂಡು ಮುಂದಿನವನ ಹಳ್ಳಿ ತಲೆಯ ವಾಸನೆಯನ್ನು ಉಚ್ಛ್ವಾಸಿಸುತ್ತಾ ನಿಂತಿದ್ದ ನನ್ನ ವಾಸನೆ ಫಣಿಯಪ್ಪನಿಗೆ ತಗುಲಿದೊಡನೆಯೇ, ಆತ ನನ್ನ ಕೈಹಿಡಿದು ಸೆಳೆದುಕೊಂಡ ತನ್ನ ಕಡೆಗೆ. ನಾನು ಮೊಸರಿನವರ ಗೊಂಚಲಿನಿಂದ ಕಿತ್ತು ಬಂದೆ. ನನ್ನ ಚಪ್ಲಿಗಳು ಕಳಚಿ ಸಂದಿನಲ್ಲಿ ಮಾಯವಾದುವು. ಫಣಿಯಪ್ಪ ಮೈಯನ್ನು ಅಕ್ಕಪಕ್ಕಕ್ಕೆ ಎರಡು ಸಾರಿ ಹೊರಳಿಸಿ, ಒಂದು ತೊಡೆ ಎತ್ತಿ ಇನ್ನೊಂದರ ಮೇಲಿಟ್ಟುಕೊಂಡ. ನಾನು ಮಲಗಿಕೊಳ್ಳುವಷ್ಟು ಸ್ಥಳವಾಯಿತು. ಕೂತುಕೊಂಡೆ.

''ನಾನು ಡಬ್ಬಲ್ ಹುಲಿ ಮಾರ್ಕಿನ ಬೀಡಿ ಉಪಯೋಗಿಸುವುದು - ಹಚ್ಚಿ ಒಂದು'' ಅಂತ ಕಟ್ಟು ತೆಗೆದ, ''ಕ್ಷಮಿಸಿ, ಅಭ್ಯಾಸವಿಲ್ಲ'' ಅಂತ ಪಾರಾದೆ.

''ನನ್ನ ಹತ್ತಿರ ಗನ್‌ಲೈಸೆನ್ಸ್ ಇರುವುದಕ್ಕೂ, ನಾನು ಹುಲಿಮಾರ್ಕು ಬೀಡಿಯನ್ನೇ ಉಪಯೋಗಿಸುವುದಕ್ಕೂ, ನನ್ನ ಮೀಸೆಗೂ ಅನೇಕರು ಸಂಬಂಧ ಹುಡುಕುವುದಕ್ಕೆ ಬುಡವಿಲ್ಲವಾದರೂ, ಇದರ ರುಚಿ ಬಲ್ಲವನೇ ಬಲ್ಲ'' ಅಂತ ಕಟ್ಟು ಒಳಗಿಟ್ಟು ಕಡ್ಡಿ ಹಚ್ಚಿದ. ''ಚಿಂತೆಯಿಲ್ಲ. ಗಾಳಿ ಜೋರಾಗಿದೆ - ನನಗೆ ಈಚೆಗೆ, ರೈಲಿನಲ್ಲಿ ವಾಂತಿಯಾಗುವುದು ನಿಂತಿದೆ'' ಅಂತ ಸ್ವಲ್ಪ ಸರಿದು ಮೂಲೆ ಹಿಡಿದೆ. ಆತ ಬೀಡಿ ಕೊಡವಿಕೊಂಡು ಮುಂದರಿದ.

'ನಾನೇನು ಇವತ್ತು ನಿನ್ನೆಯಿಂದ ಅಲ್ಲಾಸ್ವಾಮಿ ಇದನ್ನ ಸೇದೋದು. ನನ್ನನ್ನ ನಮ್ಮಪ್ಪ ಕನ್ನಡ ಲೋಯರ್ ಸೆಕೆಂಡ್ರಿಯಿಂದ ಹಿಂದಕ್ಕೆ ಕರೆಸ್ಕೋಳ್ಳೋದಕ್ಕೆ

ಒಂದು ವರ್ಷ ಮುಂಚಿನಿಂದಲೇ ಷುರುಮಾಡಿದ್ದೆ. ಹೇಗಿದ್ದರೂ ಬೇಜಾರು. ''ನಿವ್ವೆ''! ಅದೂ ಈ ಮನುಷ್ಯನ ಪಕ್ಕದಲ್ಲಿ! ಸುತರಾಂ ಸಾಧ್ಯವಿಲ್ಲದ ಮಾತು. ಮಾತಾದರೂ ಆಡೋಣ ಅಂತ ನಾನೇ ಬಾಯಿಬಿಟ್ಟೆ.

''ನೋಡಿದಿರಾ! 'ಡಬ್ಬಲ್ ಹುಲಿ' ಅಂದ ತಕ್ಷಣ ಜ್ಞಾಪಕವಾಯಿತು, ಮೊನ್ನೆ ಯಾರೋ ಎರಡು ಹುಲಿ ಹೊಡೆದರಂತೆ ನಿಜವೇ?'' ಎಂದೆ.

''ಉಂಟೇ ಸ್ವಾಮಿ ಎಲ್ಲಾದರೂ? ನಾನು ಹೇಳಿರಲಿಲ್ಲವೆ - ಒಂದು ಸಾರಿ ನಾನು ಬಂದೂಕ ಬಾರ್ ಮಾಡಿದ ಮೇಲೆ ಗೊತ್ತಾಯ್ತು 'ಹೆಣ್ಣು' ಅಂತ. ಅದಕ್ಕೇ ಸುಮ್ನೆ ಒಂದು ಕಾಲು ಮುರಿದು ಬಿಟ್ಟಿದ್ದೆ ಅಂತ? ಆ 'ಮರೀ'ನ ಹೊಡಿಯೋದಕ್ಕೇಂತ ಡಬ್ಬಲ್ ಶಿಕಾರಿಗಳು ಹೋಗಿ ಸಿಂಗಲ್ ಆಗಿ ಬಂದ ಮಾತಲ್ಲವೇ ನೀವು ಹೇಳ್ತಾ ಇರೋದು?''

''ಓ... ಹಾಗೇನು?''

''ಸರಿ. ಮತ್ತಷ್ಟಲ್ದೆ... ನಮ್ಮ ಕಾಡಿನ ಹುಲಿಗಳ ಕಿಲಾಡಿತನ ನನಗೆ ಗೊತ್ತಿಲ್ಲವೆ? ಯಾವ ಗಂಡಸಿಗೆ ಚರ್ಬಿ ಇದೇರಿ? ಬಂದೂಕ್ ಬಾರು ಮಾಡಿ ಬದುಕಿ ಬರೋ ಅಷ್ಟು?''

''ತ್ಚು... ತ್ಚು.... ತ್ಚು''

''ಮೈಸೂರು ಹುಲಿಗಳು ಕಿಲಾಡಿ ಕೋಮಿನವು ಅನ್ನೋದಕ್ಕೆ ಹೇಳ್ತೀನ್ಕೇಳೀ - ಮೊನ್ನೆ ದಸರಾದಲ್ಲಿ ವಿಜಯದಶ್ಮೀಕ್ಕೂಡ ಚಕ್ಕರ್ ಹೊಡೆದು ಹುಲಿಕಲ್ ಕಾಡಿಗೆ ಹೋದೆ. ಯಾವಾಗ ಶಿಕಾರಿಗೆ ಹೋದರೂ, ನಾನಾಯ್ತು ನನ್ನ ಬಂದೂಕವಾಯ್ತು. ಬೇರೆ ಒಂದು ನರಪ್ರಾಣಿ ಕಟ್ಟಿಕೊಂಡು ಹೋಗುಲ್ಲ ನಾನು. ಹೋದೆ. ಇನ್ನೂ ಮಠಮಠ ಮಧ್ಯಾಸ್ನ. ಒಂದು ಬೀಡಿ ಹಚ್ಚಿ, ದಂ-ತಗೊಳ್ಳೋಣಾಂತ ಕೂತೆ ಸ್ವಾಮಿ ಒಂದು ಮರದ ಪಕ್ಕದಲ್ಲಿ. ಅದು ಬಿದ್ದ ಮರವಲ್ಲ, 'ಹುಲಿ' ಅಂತ ಪತ್ತೆಯಾದದ್ದು ಅದರ ಮುದುರಿದ ಬಾಲ ನೆಲಕ್ಕೆ ಬಡಿದಾಗಲೇ. ನನ್ನ ಬಾಯಿಂದ ಬೀಡಿ ಕೆಳಗೆ ಬಿತ್ತು. ನನ್ನ ಕೈಕಾಲಿನ ತಾಖತ್ತೆಲ್ಲಾ ಹಾಗೇ ನೆಲಸಮವಾಯ್ತೂಂತನ್ನಿ. ಎಂಥಾ ಹುಲೀಂತೀರಿ! ಭಾರೀ... ಬಹು ಭಾರೀ ಮೈಸೂರು ಗಂಡು... ಇನ್ನೇನು ಸಿದ್ಧವಾಗಿದೆ...

ಎದ್ದೆ... ಹೇಗೆ ಎದ್ದೆನೋ ಆ ಪರಶಿವ ಬಲ್ಲ. ಹತ್ತುವುದಕ್ಕೆ ಮರವಿಲ್ಲ. ಮರವಿಲ್ಲವೇನು, ಅಂಥಾ ಸಮಯದಲ್ಲಿ ಕಾಲೇ ಇಲ್ಲ ಅನ್ನಿ. ಓಡಲು ಪ್ರಯತ್ನಪಟ್ಟೆನೋ - ಒಂದೇ ನೆಗೆತಕ್ಕೆ ನನ್ನನ್ನ ಒಂದು ಯಃಕಚಿತ್ ಮೊಲದಂತೆ ಅಗಿದುಬಿಡುತ್ತೆ... ಏನು ಮಾಡೋದು? ಅದೆಲ್ಲಿತ್ತೋ ಧೈರ್ಯ?... ಅಂಥಾ

ಸಮಯದಲ್ಲಿ ಭಗವಂತನೇ ಬಚಾಯಿಸ್ಬೇಕೂ ಅನ್ನೋದು ಸುಳ್ಳು ಸ್ವಾಮಿ. ನಿಮ್ಮ ಬುದ್ಧಿ ನಿಮ್ಮನ್ನಾಪಾಡಿದ್ರೇ ಉಂಟು. ಕಾಲು ನಿಗರಿಸಿ ಎದ್ದು ಒಂದು ಹೆಜ್ಜೆಯಿಟ್ಟಿತು ಬಾಯಿ ತೆರೆದುಕೊಂಡೇ. ಒಂದು ಭಾರಿ ಗುಹೆ ಅದರ ಬಾಯಿ. ಒಂದು ಸಾರಿ ನಮ್ಮನೆಯಲ್ಲಿ ನಮ್ಮಾಕೆಯ ಹಲ್ಲು ಕೀಳೋವಾಗ ಡಾಕ್ಟ್ರು ಅಷ್ಟು ಗಾಬ್ರಿ ಬಿದ್ದದ್ದು ಯಾಕೇಂತ ಆಗ ತಿಳೀತು ನನಗೆ. ಧೈರ್ಯಮಾಡಿದೆ. 'ತಿರುಪತಿ ತಿಮ್ಮಪ್ಪಾಂದೆ' ನುಗ್ಗಿದೆ 'ಗಪ್' ಅಂತ. ತೆರೆದ ಬಾಯಿಗೆ ಕೈ ಇಟ್ಟು ಬಾಯಿನ ಕೆಳಭಾಗಕ್ಕೂ ಮೇಲ್ಭಾಗಕ್ಕೂ ಗೂಟ ಹೊಡೆದಂತೆ ಟೇಕಾ ಕೊಟ್ಟು ಭದ್ರಪಡಿಸಿಕೊಂಡೆ. ಗುಡುಗಿನಂತೆ ಕುಣಿಯಲಾರಂಭಿಸಿತು. ಹೀಗೇ ಇದ್ದರೆ ಕೆಲಸ ಕೆಟ್ಟಿತು. ಅಂದಿದ್ದೇ... ಏನು ಮಾಡಿದೆ ಗೊತ್ತೆ? ಅದರ ಹಂಡೆ ಬಾಯಿನಲ್ಲಿ ಮೆಲ್ಲಗೆ ಒಂದೊಂದಾಗಿ ನನ್ನ ಎರಡು ಕಾಲುಗಳನ್ನೂ ತೂರಿಸಿ, - ಏನಾಶ್ಚರ್ಯವಿಲ್ಲ!... ಇಪ್ಪತ್ತಡಿ ಹುಲಿ ಸ್ವಾಮೀ ಅದು - ಹುಷಾರಾಗಿ ಮೈಯೆಲ್ಲಾ ಒಳಕ್ಕೆಳೆದುಕೊಂಡು ಕೈಬಿಟ್ಟೆ. ವಿಶಾಲವಾಗಿದೆ ಒಳಭಾಗ. ಉಸಿರಾಡೋದಕ್ಕೇಂತೀರಾ? ಅದರ ಎರಡು ಕಿವಿಗಳಿಮದಲೂ ಬರ್‍ತಾ ಇದ್ದಷ್ಟು ಬೆಳಕೂ ಗಾಳೀ ನಮ್ಮನೆ ನಾಲ್ಕು ಕಿಟಕೀಲಿ ಬರುಲ್ಲಾ ಸ್ವಾಮಿ.

ಹಾಗೇ ಮುಂದೆ ಹೋದೆ. ಅದರ ಹೃದಯ - ಗೇರುಸೊಪ್ಪೆಯಂತೆ ರಕ್ತ ಧುಮುಕುತ್ತಿದೆ. ಶ್ವಾಸಕೋಶಗಳು - ಅದು ಉಸಿರೆಳೆದಾಗಲೆಲ್ಲಾ ಒಳಗೆ ಗಾಢಾಂಧಕಾರ ಕವಿಯುತ್ತೆ. ಕರೀ ಪಿತ್ತಕೋಶ - ನಮ್ಮೂರಿಗೆ ಬಂದಿರುವ ಅಮೀಲ್ದಾರ್ರ ಪಿತ್ತಕೋಶ ಇನ್ನೂ ಕಪ್ಪಗಿರಬಹುದು. ಹೊಟ್ಟೆ ಸಿಕ್ಕಿತು ಆಮೇಲೆ, ಸುಳ್ಯಾಕೆ ಹೇಳಲಿ ಒಂದೆರಡು ಕಾಡು ದ್ರಾಕ್ಷಿ ಹಣ್ಣುಗಳನ್ನು ಮಾತ್ರ ಆರಿಸಿಕೊಂಡು ತಿಂದೆ ಅಲ್ಲಿ. ಹಾಗೆ ಆರಿಸುವಾಗ ಕೇವಲ ಕೆಲವು ದಿವಸದ ಹಿಂದೆ ಆ ಕಾಡಿಗೆ ಷಿಕಾರಿ ಹೋಗಿ ಪತ್ತೆ ಇಲ್ಲವಾಗಿದ್ದ ಶಂಭುವಿನ ತಲೆ ಕೂಡ ಇತ್ತು. ಅಯ್ಯೋ ಎಂದೆ. ಇದೇ ಹುಲಿ ಬಾಯಿಗೆ ಕೈಕೊಟ್ಟು ಕತ್ತರಿಸಿಕೊಂಡು ಬಂದ ಕಾಡಯ್ಯನ ವಾಚೂ ಚೈನು ಸಮೇತ ಜಠರದಲ್ಲೇ ಇತ್ತು. ಆರು ಘಂಟೆ ಏಳು ನಿಮಿಷವಾಗಿತ್ತು ಅದರಲ್ಲಿ. ಇದಲ್ಲದೆ ನಾಲ್ಕಾರು ನಾಯಿಗಳು, ಮೂರು ಮೊಲಗಳು, ಎರಡು ಇಲಿಗಳು ಆಟವಾಡುತ್ತಿದ್ದುವು ಮುಂದೆ ಹೋದೆ ಹಾಗೇ ತೆವಳಿಕೊಂಡು. ರಸ್ತೆ ಇಕ್ಕಟ್ಟಾಯಿತು - ಕರುಳುಗಳು ಇನ್ನೂ ಇಕ್ಕಟ್ಟಾಯಿತು. ಕೈ ಚಾಚಿದೆ - ಬಾಲ! ಅಲ್ಲಾಡುತ್ತಿದೆ! ತುದಿವರೆಗೆ ಕೈಚಾಚಿದೆ. ತುದಿ ಸಿಕ್ಕಿತು. ಒಳಗಿನಿಂದಲೇ ಬೆರಳುಗಳನ್ನು ಕೊಂಡಿ ಮಾಡಿ ಬಾಲದ ತುದಿಯನ್ನು ಬಿಗಿಯಾಗಿ ಹಿಡಿದೆ. ಹಿಂದಕ್ಕೆ ಎಳೆಯಲಾರಂಭಿಸಿದೆ. ('ಹೇಗೆ ಗೊತ್ತೆ' ಅಂತ ತನ್ನ ಕೋಟು ಬಿಚ್ಚಿ ತೋಳಿಗೆ ಕೈ ಹಾಕಿ ತುದಿ ಹಿಡಿದು ತೋಳನ್ನು ಹಿಂದಕ್ಕೆ ಎಳೆದು ಒಳಮೈ ಹೊರಮಾಡಿ ತೋರಿಸಿದ)

ಹುಷಾರಾಗಿ ಹಿಂದಕ್ಕೆ ಸರಿಯುತ್ತಾ ಬಂದೆ. ಕರುಳು, ಜಠರ, ಹೃದಯ ಹೀಗೇ ಗಂಟಲುತನಕ. ನಂಬಿದರೆ ನಂಬಿ ಬಿಟ್ಟರೆ ಬಿಡಿ - ಬಾಲದ ಮುಷ್ಟಿಮಾತ್ರ ಬಿಡಲಿಲ್ಲ ಪುನಃ ಬಾಯಿಗೆ ಬಂದು ನಾಲಿಗೆಗೆ ಬಲವಾಗಿ ಒದ್ದೆ. ಬಾಯಿಬಿಟ್ಟಿತು. ಕೈಕೊಟ್ಟುಕೊಂಡು ಅಡ್ಡಲಾಗಿ - ಹುಷಾರಾಗಿ ನನ್ನ ದೇಹವನ್ನೂ, ಈ ಕೋಟಿನ ತೋಳಿನಂತೆ ಒಳಮೈ ಹೊರಗಾಗಿ ಬರುತ್ತಿದ್ದ ಅದರ ದೇಹವನ್ನು ಹಿಡಿದು ತರುತ್ತಿದ್ದ ಕಪಿಮುಷ್ಟಿಯನ್ನೂ, ವಿಶ್ವಪ್ರಯತ್ನದಿಂದ ಹೊರಕ್ಕೆಳೆದು ಧುಮುಕೇಬಿಟ್ಟೆ ಭೂಮಿಗೆ! ಆದರೂ ಕಿಲಾಡಿ ಹುಲಿ ಅದು ಸ್ವಲ್ಪ ಒದ್ದಾಡಿ ನಿಂತೇ ಬಿಟ್ಟಿತು. ಆದರೇನು, ಚರ್ಮ ಒಳಗೆ - ಮಾಂಸ ಹೊರಗೆ, ಹಲ್ಲು ಹೊರಗೆ - ಮೀಸೆ ಒಳಗೆ...''

''ಬುರುಡೆ ಅನ್ನಬಹುದು ನೀವು. ಬೇಕಾದರೆ ಹೋಗಿ ನೋಡಿ ಹುಲಿಕಲ್ಲಿಗೆ - ಇವತ್ತಿಗೂ ಓಡಾಡುತ್ತಿದೆ ಅದೇ ಹುಲಿ - ಅದೇ ಸ್ಥಿತಿಯಲ್ಲಿ ನನಗಾಗಿ ಕಾಯುತ್ತಿದೆ - ಎಂದು ತಿರುವಿ ಹಾಕುತ್ತಾನೋ ಪುಣ್ಯಾತ್ಮ ಅಂತ''.

'ಇಷ್ಟು ಬಲವಾದ ಬುರುಡೆ ಬಿಡುವುದಕ್ಕೆ ನಾಚಿಕೆಯಾಗುವುದಿಲ್ಲವೇ ಈ ಘಟಕ್ಕೆ' ಅನ್ನಿಸಿತು. ಆದರೂ ಆತನ ವಾಕ್ಚಾತುರ್ಯಕ್ಕೆ ಸಮ್ಮತ ಹೊಡೆದು ನಾನು ತೆಪ್ಪಗೆ ಕೂತರೆ, ಆತ ಬಿಡಬೇಕಲ್ಲ!

''ಇದಕ್ಕೇನು ಸ್ವಾಮೀ ಇಷ್ಟು ಆಶ್ಚರ್ಯಪಡ್ತೀರಿ. ಇಂಥದ್ದು ನೂರಾರು ಅನುಭವ ಆಗಿದೆ ನನಗೆ. ಇನ್ನೂ ಎಂತೆಂಥ ಕಿಲಾಡಿ ಹುಲಿಗಳಿವೆ ಅಂತೀರಿ ಹುಲಿಕಲ್ ಕಾಡಿನಲ್ಲಿ.'' (ನನ್ನ ಮುಖದಲ್ಲಿನ ಬೇಜಾರು, ಆಕಳಿಕೆಗಳನ್ನು ಅಲಕ್ಷಿಸಿ ಮುಂದುವರಿಸಿದ ಪಾಪಿ!)

''ನನಗೆ ರಾತ್ರಿ ಷಿಕಾರಿ ಬಹು ಇಷ್ಟ. ಕಾಡಿನಲ್ಲಿ ಕ್ಯಾಂಪ್ ಮಾಡಿ ವಾರಗಟ್ಟಲೆ ರಾತ್ರಿ ಷಿಕಾರಿ ಮಾಡುವುದುಂಟು ನಾನು. ರಾತ್ರಿ ಹನ್ನೆರಡು ಗಂಟೆಮೇಲೆ ಹೊರಟು ನನ್ನ ಮಾಮೂಲು ಮರದ ಪೊಟರೆಯಲ್ಲಿ ಕೂತು ಸುತ್ತಲೂ ನೋಡುವುದು. ಹಗಲಿಗಿಂತ ಬೇಗ ಪತ್ತೆಯಾಗುತ್ತವೆ ನನ್ನ ಕಣ್ಣಿಗೆ ಹುಲಿಗಳು ರಾತ್ರಿಯಲ್ಲಿ; ಹೊಳಪಾಗಿ ಝಳಪಿಸುವ ಎರಡು ಕಣ್ಣುಗಳೇ ಕಾಣಿಸುವುದು ಅಮಾವಾಸ್ಯೆ ಕತ್ತಲಿನಲ್ಲಿ. ಸರಿಯಾಗಿ ಎರಡು ಕಣ್ಣುಗಳ ಮಧ್ಯಕ್ಕೆ ಗುರಿ ಇಟ್ಟು ಹೊಡೆದು ಬಂದು ಮಲಗಿದರೆ, ಬೆಳಗಾಗೆದ್ದು ನನ್ನ ಕಡೆಯವರು ಹೋಗಿ ಹುಲಿಯ ಶವ ಎತ್ತಿಕೊಂಡು ಬರುವುದು ವಾಡಿಕೆ. ಹೀಗೇ, ನೂರಾರು ಚರ್ಮಗಳನ್ನು ಮನೆಯಲ್ಲಿ ಹಾಸಿರುವುದು ನಾನು.''

ನಾನು ಒಂದು ಸಾರಿ ಕಣ್ಣುಜ್ಜಿಕೊಂಡು, ಒಂದು ಆಸ್ಪರಿನ್ ಗುಳಿಗೆ ನುಂಗಿದೆ. ಆತನಿಗೆ ಕರುಣೆ ಬರಲಿಲ್ಲ.

''ಒಂದು ಸಾರಿ, ಹೀಗೇ ಹೊರಟೆ ಶಿಕಾರಿ. ಮೊನ್ನೆ ಮೊನ್ನೇಂದ್ರೇ. ಹೋಗಿ ಎಂದಿನಂತೆ ಅಮಾವಾಸ್ಯೆ ರಾತ್ರಿ ಗುರಿ ಇಟ್ಟು ಹೊಡೆದು ಬಂದು ಕ್ಯಾಂಪಿನಲ್ಲಿ ಮಲಗಿದೆ. ಬೆಳಗ್ಗೆ ಎದ್ದು ಕಾಡೆಲ್ಲಾ ಹುಡುಕಿದರೂ ಒಂದು ಸತ್ತ ಬೆಕ್ಕಿನ ಶವ ಕೂಡ ಸಿಕ್ಕಲಿಲ್ಲ. ನನ್ನ ಗುರಿ ತಪ್ಪುವುದೆಂದರೆ ಅರ್ಥವೇ ಇಲ್ಲಸ್ವಾಮಿ. ನನಗೆ ರೇಗಿತು - ಆಶ್ಚರ್ಯವೂ ಆಯಿತು. 'ಇರಲಿ, ಮಾಡುತ್ತೇನೆ' ಅಂತ ಮರಳಿ ಯತ್ನ ಮಾಡಿದೆ ಮಾರನೇ ರಾತ್ರಿ. ಹೆಣ ಬೀಳಲಿಲ್ಲ. ಹೀಗೆ ಮೂರು ರಾತ್ರಿ ವ್ಯರ್ಥವಾದಮೇಲೆ ಒಂದು ಉಪಾಯ ಹೂಡಿದೆ! ಊರಿನಿಂದ ಸಾಹುಕಾರ್ ಸಣ್ಣಯ್ಯನ ಕಾರು ತಂದು ಷಿಕಾರಿ ಸ್ಥಳದಲ್ಲಿ ನಿಲ್ಲಿಸಿದೆವು - ಹುಲಿಗಳು ಇರುತ್ತಿದ್ದ ಸ್ಥಳಕ್ಕೆ ಎದುರಾಗಿ ನಿಲ್ಲಿಸಿದೆವು. 'ರಾತ್ರಿ ಎಂದಿನಂತೆ ನಾನು ಬಂದೂಕು ಬಾರ್ ಮಾಡಿ, ಗುಂಡು ಹಾರಿಸಿದ ಕೂಡಲೆ ಕಾರಿನ ಲೈಟುಗಳನ್ನು ಬೇಟೇ ಸ್ಥಳಕ್ಕೆ ಜೋರಾಗಿ ಬಿಟ್ಟು ಈ ಐಬನ್ನು ಪತ್ತೆ ಹಚ್ಚಬೇಕು' ಅಂತ ಏರ್ಪಾಡಾಯಿತು. ಎಲ್ಲಾ ಸಿದ್ಧವಾಯಿತು ರಾತ್ರಿ ಹೋದೆವು. ಕಾರ್ಗತ್ತಲು. ಎಂದಿನಂತೆ ಎರಡು ಕಣ್ಣುಗಳು ಝಳಪಿಸುತ್ತಿವೆ. ಗುಂಡು ಹಾರಿತು - ಬಿಟ್ಟರು ಭಾರೀ ಲೈಟುಗಳನ್ನು ಎರಡನ್ನೂ. ಪತ್ತೆಯಾಯಿತು ಮರ್ಮ! ಏನು? ಗುಂಡು ಎಲ್ಲಿ ಹೋಯಿತು ಅಂತ.''

ನನ್ನ ಕುತೂಹಲ ಸ್ವಲ್ಪ ಕೆರಳಿತು. ಆಶ್ಚರ್ಯದಿಂದ ಬಾಯಿ ಬಿಟ್ಟು ಕೂತೆ, ಕಣ್ಣು ಅಗಲಿಸಿಕೊಂಡು.

''ಹುಲಿ ಸಿಕ್ಕಿತು. ಆದರೆ ಒಂದಲ್ಲ - ಎರಡು ಸಿಕ್ಕಿದುವು. ಏನು ಮಾಡಿವೆ ಗೊತ್ತೆ? ಒಂದರ ಪಕ್ಕದಲ್ಲಿ ಒಂದು ನಿಂತುಕೊಂಡು, ಒಂದು ಹುಲಿ ಬಲಗಣ್ಣನ್ನೂ, ಒಂದು ಹುಲಿ ಎಡಗಣ್ಣನ್ನೂ ಮುಚ್ಚಿಕೊಂಡಿವೆ. ನಾನು ಹೊಡೆದ ಗುಂಡು ಎರಡು ಕಣ್ಣುಗಳ ಮಧ್ಯೆ ಗಾಳಿಯಲ್ಲಿ ಮಾಯವಾಯಿತು!... ಹೇಗಿದೆ ಮೈಸೂರು ಹುಲಿಗಳ ಕಿಲಾಡಿತನ?...''

ಅಷ್ಟರಲ್ಲಿ ನಮ್ಮೂರು ಕೆರೆ ಕಾಣಿಸಿತು, ಚೀಲ, ಚಪ್ಪಲಿ, ಚೊಂಬು ಹುಡುಕಿ ಎತ್ತಿಟ್ಟುಕೊಂಡೆ. ''ಎಲಾ, ಇಷ್ಟು ಗಡವನಾಗಿ, ಎಮ್ಮೆ ಹಾಗಿದ್ದಾನೆ - ಈತ ಚಿಕ್ಕ ಮಕ್ಕಳಿಗೆ ಹೊಡೆದಂತೆ ಇಂಥಾ ಭಾರೀ ಬುರುಡೆ ಬಿಡುತ್ತಾನಲ್ಲ... ಕೊಂಚವೂ ನಯ... ನಾಚಿಕೆ? ನಂಜನಗೂಡು ಆಚೆಗೆ ಇರಬಹುದು ಇವನ ಹುಟ್ಟುಸ್ಥಳ'' ಅಂದುಕೊಂಡು ಸ್ಟೇಷನ್ ಕಾಣಿಸುತ್ತಲೂ ಏಳುವುದಕ್ಕೆ ಪ್ರಯತ್ನಿಸಿದ ಕೂಡಲೇ ಹೇಳಿದ;

''ಹೇಗಿದೆ ಸ್ವಾಮಿ ಕತೆಗಳು? 'ಯಾರು ಭಾರೀ ಬುರುಡೆ ಬಿಡುತ್ತಾರೆ' ಅನ್ನೋ ಪಂದ್ಯದಲ್ಲಿ ಮೊನ್ನೆ ಈ ಕತೆಗಳನ್ನು ಹೇಳಿ ನಾನು ಆರುದೋಸೆ, ನಾಲ್ಕು ಇಡ್ಲಿಗಳನ್ನು ಗೆದ್ದೆ ನಮ್ಮೂರಿನಲ್ಲಿ, ಬೇಜಾರಾಯಿತೇನೋ ನಿಮಗೆ. ಇನ್ನೊಂದು ಸಾರಿ ಸಿಕ್ಕಾಗ ''ವ್ಯಾಘ್ರಾ'' ಎನ್ನೋ ಬಿರುದು ಬಂದ ಕತೆ ಹೇಳುತ್ತೇನೆ - ನಮಸ್ಕಾರ.''

# ದೇವರಿಗೆ ನಾಮ ಇಟ್ಟರು

– ನಾರೂಶ್ರೀ ಸೂರಿ

ದೇವರು ಸರ್ವಾಂತರ್ಯಾಮಿ, ಎಲ್ಲ ಕಡೇಲೂ ಇರತಾನೆ ಅನ್ನೋದರ ಬಗ್ಗೆ ಪ್ರತ್ಯಕ್ಷ ಅನುಭವ ನಾನು ಈ ಪುಡಾರಿಪುರ ಲೇಔಟಿಗೆ ಬಂದಾಗಲಿಂದಲೂ ನನಗೆ ನಿತ್ಯಾನೂ ಆಗತಾನೆ ಇರತ್ತೆ. ಯಾವ ರಸ್ತೇನೆ ತಗೊಳ್ಳಿ, ಯಾವುದೇ ಗಲ್ಲೀನೇ ತಗೊಳ್ಳಿ ಒಂದು ನೂರು ನೂರು ಅಡೀಗೆ ಒಂದು ಅಂತ ಹೇಳಬಹುದು, ಆ ಲೆಕ್ಕದಲ್ಲಿ ಒಂದು ಪರಮಾರ್ಥ ಸ್ವಾಮಿಯ ದೇವಸ್ಥಾನ, ದೇವಸ್ಥಾನಗಳ ಮುಂದೆ ಕಾಣಿಕೆ ಹಾಕೋಕ್ಕೆ ಒಂದು ಹುಂಡಿ.

ಆದರೆ ಒಂದು ವಿಷಯ - ದೇವಸ್ಥಾನಗಳು ಎಷ್ಟು ಇದ್ದರೇನು, ಎಲ್ಲಾ ಕಡೇನೂ ಇರೋನು ಒಬ್ಬನೇ ಪರಮಾರ್ಥ ಸ್ವಾಮೀನೇ ಅಲ್ಲವೇ ಅಂದುಕೊಂಡು ಭಕ್ತಾದಿಗಳು ತಮ್ಮ ಉದ್ದೇಶ ಸಾಧನೆಗೆ, ತಮ್ಮ ಇಷ್ಟಾರ್ಥ ಸಿದ್ಧೀಗೆ ಅಂತ ತಮ ತಮಗೆ ಇಷ್ಟ ಬಂದ ಗುಡಿಗಳಿಗೆ ಹೋಗತಾ ಇದ್ದರೆ ಕೆಲವು ಕಡೆ ದೇವರಿಗೆ ವ್ಯಾಪಾರಾನೇ ಖೋತಾ, ಇನ್ನು ಕೆಲವು ಕಡೆ ನಿಭಾಯಿಸೋಕ್ಕೆ ಆಗದೇ ಇರೋ ಅಷ್ಟು ಭಕ್ತರು ಮತ್ತೆ ಅವರ ಅಹವಾಲುಗಳು ಅನ್ನೋ ಪರಿಸ್ಥಿತಿ ಬರಬಹುದಲ್ಲ. ಅದಕ್ಕೇ ಈ ದೇವಸ್ಥಾನಗಳ promoter ಗಳು ಬಹಳಾನೇ ದೂರದೃಷ್ಟಿಯಿಂದ ಒಂದೊಂದು ಉದ್ದೇಶ ಸಾಧನೆಗೆ, ಒಂದೊಂದು ಇಷ್ಟಾರ್ಥ ಸಿದ್ಧೀಗೆ ಇಂತಿಂಥ ದೇವಸ್ಥಾನದಲ್ಲಿರೋ ಇಂತಿಂಥ ಹೆಸರಿನ ಪರಮಾರ್ಥ ಸ್ವಾಮಿ ಅಂತ designate ಮಾಡಿದ್ದಾರೆ. For example, ಪರೀಕ್ಷೇನಲ್ಲಿ ಪಾಸಾಗಬೇಕೂ ಅನ್ನೋರು ಮೂರನೆ ಕ್ರಾಸ್‌ನಲ್ಲಿರೋ ವಿದ್ಯಾಪ್ರದಾಯಕ ಪರಮಾರ್ಥ ಸ್ವಾಮಿ ದೇವಾಲಯಕ್ಕೆ, ದುಡ್ಡು ಕಾಸಿನ ಪರಿಸ್ಥಿತಿ ಸುಧಾರಿಸಬೇಕು ಅಂದರೆ ಸಂಪತ್ಸುಧಾರಕ ಪರಮಾರ್ಥಸ್ವಾಮೀಗೆ ಅಂತ ಬಜಾರ್ ಸ್ಟ್ರೀಟ್‌ನಲ್ಲಿ ಕಟ್ಟಿರೋ ದೇವಸ್ಥಾನಕ್ಕೆ... ಈ ಥರದಲ್ಲಿ ಹೋಗಿ ಅಲ್ಲಿ ನಿಗದಿ ಮಾಡಿರೋ ಪೂಜೆಗಳನ್ನ ಮಾಡಿಸಬೇಕು.

ಈ ಪ್ರಕ್ರಿಯೆ ಎಂದಿಗೂ static ಅಲ್ಲ. ದಿನಗಳು ಕಳೆದ ಹಾಗೆಲ್ಲ ಜನಗಳ ಹೊಸ ಹೊಸ ಅಗತ್ಯಗಳು ಏನಿರಬಹುದು ಅನ್ನೋದನ್ನ ಯಾರಾದರೂ anticipate ಮಾಡತಾನೆ ಇದ್ದು, ಅದನ್ನೆಲ್ಲಾ ಪೂರೈಸೋದಕ್ಕೆ ಪರಮಾರ್ಥ ಸ್ವಾಮಿ ಯಾವ ಹೆಸರು ಕಟ್ಟಿಕೊಂಡು ಬರಬೇಕು ಅನ್ನೋದನ್ನ ನಿರ್ಧಾರ ಮಾಡಿ ಅದಕ್ಕೊಂದು ಹೊಸ ದೇವಸ್ಥಾನಾನ ಕಟ್ಟಿಸತಾನೇ ಇರತಾರೆ. ಹೋದ ತಿಂಗಳು

consecrate ಮಾಡಿದ್ರಲ್ಲ, ಆ ಶರ್ಕರ ನಿಯಂತ್ರಕ ಪರಮಾರ್ಥ ಸ್ವಾಮಿ ದೇವಸ್ಥಾನ, ಅದಕ್ಕೆ ಹರಕೆ ಹೊತ್ತುಕೊಂಡರೆ ಡಯಾಬಿಟೀಸ್ ಓಡಿತಕ್ಕೆ ಬರತ್ತಂತೆ, ಮತ್ತೆ ಇನ್ನೊಂದು ಗುಡಿ ಕಟ್ಟತಾ ಇದ್ದಾರೆ, premature retirement, compulsory retirement ಅನ್ನೋವನ್ನ ತಪ್ಪಿಸೋಕ್ಕೆ ನಿವೃತ್ತಿ ನಿಧಾನಕ ಪರಮಾರ್ಥ ಸ್ವಾಮಿ ಅಂತಲಂತೆ ದೇವರಿಗೆ ಹೆಸರು.

ಮತ್ತೆ ಗುಡಿಗಳು ಇದ್ದ ಮೇಲೆ ಅವಕ್ಕೆಲ್ಲ ಒಂದೊಂದು ಸಮಿತಿ, ಅವಕ್ಕೊಂದಿಷ್ಟು ಜನ ಕಮಿಟಿ ಮೆಂಬರುಗಳು, ಸೆಕ್ರೆಟರಿ, ಜಾಯಿಂಟ್ ಸೆಕ್ರೆಟರಿ, ಟ್ರೆಷರರ್ರು, ಪ್ರೆಸಿಡೆಂಟು ಅನ್ನೋವರು ಇರಲೇ ಬೇಕಲ್ಲವೆ? ನನ್ನನ್ನೂ ಎಳಕೊಂಡು ಹೋಗಿ ಆ ಬ್ರೆಡ್ ಅಂಗಡಿ ಪಕ್ಕದ್ದು ಪರಮಾರ್ಥ ಸ್ವಾಮಿ ಗುಡೀನಲ್ಲಿ ಕಮಿಟಿ ಮೆಂಬರು ಅಂತ ಮಾಡಿ ಕೂಡಿಸಿದ್ದಾರೆ. ನನ್ನ ಕೆಲಸ ಏನು?... ತಿಂಗಳಲ್ಲಿ ಒಂದು ಭಾನುವಾರ ಮೀಟಿಂಗಿನಲ್ಲಿ ಹೋಗಿ ಕೂತಿರೋದು, ಮತ್ತೆ ಶನಿ ಶನಿವಾರ ರಾತ್ರಿ ಹೋಗಿ ಹುಂಡೀ ಕಾಸು, ತಟ್ಟೇ ಕಾಸು ಅನ್ನೋವನ್ನೆಲ್ಲಾ ವಿಂಗಡಿಸಿ ಎಣಿಸಿ ಕೊಡೋದು. ಅದು ಕೆಲವು ಸಲ ಹತ್ತು ಗಂಟೆ ಆದರೂ ಮುಗೀತಾ ಇರೊಲ್ಲ.

ಅವತ್ತು ಎಲೆಕ್ಷನ್ ಹಿಂದಿನ ದಿನದ ಶನಿವಾರ ಮನೇಗೆ ಬರೋ ಹೊತ್ತಿಗೆ ಸಮರಾತ್ರೀನೇ ಆಗಿತ್ತು. ನಿದ್ದೆಗಣ್ಣಲ್ಲಿ ಒಂದಿಷ್ಟು ಅನ್ನ ಬಾಯಿಗೆ ಹಾಕ್ಕೊಂಡು ಮಲಕ್ಕೊಂಡೆ. ಮಾಮೂಲು ರಾಮಸ್ಕಂಧಂ ಹೇಳೋಕ್ಕೆ ಮುಂಚೇನೆ ನಿದ್ದೆ ಬಂದಿತ್ತು.

ಸುಡುಗಾಡು ಫೋನು ಬೆಳಗ್ಗೆ ಆರು ಘಂಟೆ ಆಗೊಕ್ಕಿಲ್ಲ ಹೊಡಕೊಳ್ಳೊಕ್ಕೆ ಶುರು ಆಯಿತು. ಯಾವನು ಈ ಗೂಬೆ ಅಂತ ತಗೊಂಡರೆ ಅದು ನಮ್ಮ ಕಮಿಟಿ ಜಾಯಿಂಟ್ ಸೆಕ್ರೆಟರಿ ರಾಮದಾಸಪ್ಪನವರು.

''ಈವತ್ತು ಎಂಟು ಗಂಟೇಗೆ ಕಮಿಟಿ ಎಮರ್ಜೆನ್ಸಿ ಮಿಟಿಂಗ್ ನಮ್ಮನೇಲಿ - ತಪ್ಪಿಸ್ಕೋ ಬೇಡಿ...''

ಅರೆ, ಇದೆಂಥಾದ್ದು? ಹೋದವಾರ ತಾನೆ ಮೀಟಿಂಗ್ ಆಯಿತು, ಮುಂದಿನ ತಿಂಗಳು ನಡೀ ಬೇಕಾಗಿರೋ ದೇವಸ್ಥಾನದ್ದು ಹತ್ತನೇ ವಾರ್ಷಿಕೋತ್ಸವದ ಬಗ್ಗೆ ಸಾಕಷ್ಟು ಮಾತಾಡಿದ್ದೂ ಆಯಿತು. ಮತ್ತೆ ಈವತ್ತೂ ಮೀಟಿಂಗ್ ಅನ್ನೋದರಲ್ಲಿ ಏನಾದ್ರೂ sense ಇದೆಯೆ ಅಂತ ಕೇಳೋಣ ಅನ್ನೋ ಅಷ್ಟರಲ್ಲಾಗಲೆ ಇಟ್ಟುಬಿಟ್ಟರು. ವಿಧಿ ಇಲ್ಲ ಅಂದುಕೊಂಡು ಎದ್ದು ಒಂದಿಷ್ಟು ಮುಖ ಸಾರಿಸ್ಕೊಂಡು ಅವರ ಮನೆಗೆ ಹೋದೆ.

ಕಮಿಟಿ ಬೈ-ಲಾಗಳ ಅನುಸಾರ ಈ ರೀತಿ ಎಮರ್ಜೆನ್ಸಿ ಮೀಟಿಂಗು ನಡೀ ಬೇಕಾದರೆ ಕಮಿಟಿ ಮೆಂಬರುಗಳು ಮಿನಿಮಂ ನಾಕು ಜನ ಆದರೂ ಇರಬೇಕು,

ಮತ್ತೆ ಸೆಕ್ರೆಟರಿ ಅನ್ನೋದು ಇರಲೇಬೇಕು. ಆದರೆ ಈ ಮೀಟಿಂಗಿನಲ್ಲಿ ಇದ್ದೋರು ಯಾರು? ಚನ್ನಕೇಶವಯ್ಯ, ರಾಜೇಗೌಡರು, ದೇಶಿಕಾಚಾರ್ರು... ಎಲ್ಲಾ ರಾಮದಾಸಪ್ಪನವರ ಚೇಲಾಗಳು, ಮತ್ತೆ ಆ fence - sitter ರುದ್ರಪ್ಪ; ಮತ್ತೆ ಬೇರೆ ಯಾವನೂ ಇಲ್ಲ. ರಾಮದಾಸಪ್ಪನವರೂ ಮುಖ ಹುಳ್ಳಗೆ ಮಾಡಿಕೊಂಡು ಮಾತಿಲ್ಲದೀರ ಕೂತಿದ್ದಾರೆ. ಹಾಗಾದರೆ ಏನೋ ಇದೆ ತಗಲೂಫಿ, ಕಮೀಟಿನಲ್ಲಿ vertical ಓ horizontal ಓ ಇಲ್ಲಾ ಇನ್ನು ಯಾವದೋ ರೀತೀದು split ಅನ್ನೋದು ಇಷ್ಟರಲ್ಲೆ ಗ್ಯಾರಂಟಿ ಅನ್ನಿಸ್ತು.

ಎರಡು ನಿಮಿಷ ಆದ ಮೇಲೆ ರಾಮದಾಸಪ್ಪನವರು ವಿಷಯಕ್ಕೆ ಬಂದರು:

''ನಾವೆಲ್ಲ ಒಂದಾಗಿ ಸೇರಿಕೊಂಡು ಒಂದು ದೇವಸ್ಥಾನಾನ ಹೊಸದಾಗೇ ಕಟ್ಟಿಸ್ಬೇಕು, ಪರಮಾರ್ಥ ಸ್ವಾಮೀಗೆ...''

ಅರೆ, ಅಷ್ಟೊಂದು ಒಳ್ಳೇ ವ್ಯಾಪಾರ ಆಗತಿರೊ ಗುಡೀನ ಬಿಟ್ಟಬಿಟ್ಟು ಹೊಸದಾಗ ಏನೋ ಮಾಡತೀನಿ ಅಂತ ಹೊರಟಿದ್ದಾರಲ್ಲ, ಇವರ ಬುದ್ಧೀಗೆ ಏನು ಹೇಳೋಣ? ಹಾಗಂತ ಕೇಳಿದ್ದಕ್ಕೆ ಉತ್ತರ ಅನ್ನೋ ಥರದಲ್ಲಿ - ಪ್ರಿಂಟಿಂಗ್‌ನಿಂದ ರಾತ್ರಿ ಬಂದಿತ್ತು ಅಂತ ಕಾಣತ್ತೆ - ಮುಂದಿನ ತಿಂಗಳದು ಪ್ರೋಗ್ರಾಮಿಂದು ಇನ್ವಿಟೇಷನ್ ಕಾರ್ಡು ಅದನ್ನ ನೋಡಿ ಅಂತ ನಮಗೆಲ್ಲ ಕೊಟ್ರು.

ಅವರು ದೇವಸ್ಥಾನಕ್ಕೆ ಸೋಡಚೀಟಿ ಕೊಟ್ಟು ಹೋಗೋ ಅಂಥಾದ್ದು ನನಗೇನೂ ಕಾಣಲಿಲ್ಲ, ಆ ಇನ್ವಿಟೇಶನ್‌ಗಳಲ್ಲಿ. ನಾನು ಹುಬ್ಬೇರಿಸಿದ್ದು ನೋಡಿ.

''ಸ್ವಲ್ಪ ಸರಿಯಾಗಿ ನೋಡಿ... ಆ ಸೆಕ್ರೆಟರಿ ಪುಟ್ಟಪ್ಪ ಅನ್ನೋನ ಹೆಸರು ಹ್ಯಾಗೆ ಬಂದಿದೆ, ನಂದು ಹ್ಯಾಗೆ ಬಂದಿದೆ...''

''ಹ್ಯಾಗೆ ಬಂದಿದೇ ಅಂದ್ರೆ? ... ಅವರದು ಸ್ವಲ್ಪ ದೊಡ್ಡಕ್ಷರದಲ್ಲಿ ಪ್ರಿಂಟಾಗಿದೆ, ನಿಮ್ಮದು ಸ್ವಲ್ಪ ಅದಕ್ಕಿಂತ ಚಿಕ್ಕದು ಅಷ್ಟೆ... ಅದಕ್ಕೆಲ್ಲ ಯಾಕೆ ಹೀಗೆ upset ಆಗತಾ ಇದ್ದೀರ?... after all, it is a small matter...''

"Small matter ಊ?...it is a matter of prestige... betel-nut gone honour..."

ರಾಮದಾಸಪ್ಪನವರಿಗೆ ತುಂಬಾ ಕೋಪ ಬಂದು ಯಾರನ್ನಾದ್ರೂ murder ಮಾಡಬೇಕೂ ಅಂತ ಅನ್ನಿಸ್ದಾಗ ಇಂಗ್ಲಿಷನ್ನ ಹಿಡಕೋತಾರೆ ಈವಾಗಲೂ ಹಾಗೆ; ಕನ್ನಡದಲ್ಲಿ ಅದೇನೋ ಗಾದೆ ಇದ್ಯಲ್ಲ, ಅದಕ್ಕೆ ಈಗ ಗ್ರಹಚಾರ, ಇಂಗ್ಲಿಷಲ್ಲಿ ಹೇಳತಾ ಇದ್ದಾರೆ!

ಅಂದ ಮೇಲೆ ಇನ್ನು ಅವರ ಹತ್ರ ವಾದ ಮಾಡಿ ಉಪಯೋಗ ಇಲ್ಲ ಅಂದ ಹಾಗಾಯ್ತು.

''ಮುಂದಿನ ತಿಂಗಳು ಅವರ ವಾರ್ಷಿಕೋತ್ಸವದ ದಿನಾನೇ ಇಲ್ಲಿ ನಮ್ಮದರದ್ದೂ ಪ್ರತಿಷ್ಠಾಪನೆ ಆಗಬೇಕು...''

''ಸಾರ್, ಅಷ್ಟೊಂದು ಬೇಗ ಅಂದ್ರೆ ಹ್ಯಾಗೆ?... first of all, ದೇವಸ್ಥಾನ ಕಟ್ಟಿಸೋದಕ್ಕೆ ಒಂದು ಜಾಗಾನಾದ್ರೂ ಬೇಡವಾ?...''

''ಅದೇನು ದೊಡ್ಡ ವಿಷಯಾ ಅಂತ ಮಾತಾಡ್ತಾ ಇದ್ದೀರ... ಹಿಂದಿನ ಬೀದೀನಲ್ಲಿ ಆ ಎಂಟುನೂರಾ ಒಂಭತ್ತನೇದು ಸೈಟು ಖಾಲಿ ಇದ್ಯಲ್ಲ, ಅದೇ ಹಿಡಕೊಂಡರೆ ಆಯಿತು, ಅಷ್ಟೇ... east-facing ಉ, ವಾಸ್ತು ಪ್ರಕಾರಾನೂ ಸರಿಯಾಗಿ ಇರತ್ತೆ...''

''ಸಾರ್, ಆ ಸೈಟು ಪಾಪ ಆ ಕಾಲೇಜು ಮೇಷ್ಟ್ರು ಕಾಶೀಪತಯ್ಯನವರು ಅವರದ್ದು... ಮುಂದಿನ ವರ್ಷ ರಿಟೈರ್ ಆದಾಗ ಮನೆ ಕಟ್ಟಿಸಬೇಕು ಅಂತ ಇದ್ದಾರೆ. ಅಂಥದ್ರಲ್ಲಿ ನಾವು...?'' - ನಾನು ಆತಂಕದಿಂದಲೇ ಕೇಳಿದೆ.

''ಏನು, ಹತ್ತು ವರ್ಷದಿಂದ ಕಟ್ಟಿಸದೇ ಇದ್ದ ವಿಧಾನ ಸೌಧಾನ ಇನ್ನು ಮೇಲೆ ಕಟ್ಟಿಸ್ತಾರಂತೊ? ಹಾಗೆ ಹೇಳೋ ಅವರಿಗೆ ಕೈನಲ್ಲಿ ಕಾಸಿಲ್ಲ, ಅದನ್ನ ನಂಬಿಕೊಂಡು ಇಲ್ಲಿ ಬಂದು ಹೇಳತಾ ಇರೋ ನಿಮಗೆ ತಲೇನಲ್ಲಿ ಬುದ್ಧಿ ಇಲ್ಲ... ಅಷ್ಟಕ್ಕೂ ನಾನು ಮಾಡತಾ ಇರೋದು ಅದೇನು ನನ್ನ ಮನೇ ಕೆಲಸಾನಾ?...''

Objection over-ruled ಅಂತ ಅವರು ಅಪ್ಪಣೆ ಮಾಡಿದ ಮೇಲೆ ನನ್ನದೇನು ನಡಿಯುತ್ತೆ ಹೇಳಿ?

ಮುಂದಿನ ಪ್ರಶ್ನೆ ಸ್ವಾಮೀಗೆ ಏನು ಹೆಸರಿಡೋದು ಅನ್ನೋದು. ಪ್ರತಿಷ್ಠಾಪನೆಗೆ ಮುಂದೆ ವಿಗ್ರಹ ಬೇಕು, ವಿಗ್ರಹ ಮಾಡೋಕ್ಕೆ ಮುಂಚೆ ಅದಕ್ಕೊಂದು ಹೆಸರು ಕೊಟ್ಟಿರಬೇಕು - ಮತ್ತೆ ಆ ಹೆಸರನ್ನ ಮುಂಚೆ ಯಾವ ಗುಡೀಲೂ ಬಳಸಿರಬಾರದು. ಅಂಥಾ ಹೆಸರು ಯಾವದಿರೋಕ್ಕೆ ಸಾಧ್ಯ?

ಎಲ್ಲಾರೂ ಏನೇನೋ ಹೆಸರುಗಳನ್ನೆಲ್ಲಾ ಸೂಚಿಸತಾ ಹೋದರು - ಅಭಯ ಪ್ರದಾಯಕ ಪರಮಾರ್ಥ ಸ್ವಾಮಿ... ಆತಂಕಹಾರಕ ಪರಮಾರ್ಥ ಸ್ವಾಮಿ... ಉತ್ತರ ಪ್ರದಾಯಕ ಪರಮಾರ್ಥ ಸ್ವಾಮಿ... ವೃತ್ತಿ ವಿಧಾಯಕ ಪರಮಾರ್ಥ ಸ್ವಾಮಿ... ಎಷ್ಟೆಷ್ಟು ಒಳ್ಳೊಳ್ಳೆ ಹೆಸರುಗಳು! ಆದರೆ no use - already used up, ಎಲ್ಲಾನೂ.

ಛೆ, ಮುಂದಿನ ತಿಂಗಳು ಪ್ರತಿಷ್ಠಾಪನೆ ಆಗಬೇಕೂ ಅಂದ್ರೆ ಈವತ್ತು ಸಂಜೇಗೆ ವಿಗ್ರಹಕ್ಕೆ ಆರ್ಡರ್ ಕೊಟ್ರೇನೇ ಆಗೋದು ಕೆಲಸ. ಜುಜುಬಿ ಈ ಒಂದು ಹೆಸರು

ಸಿಕ್ತಿಲ್ಲ ಅನ್ನೋ ಕಾರಣಕ್ಕೆ ಎಲ್ಲಾನ್ನೂ ಮುಂದಕ್ಕೆ ಹಾಕೋದು ಅಂದರೆ ಎಂಥಾ ನಾಚಿಗೆಕೇಡಿನ ವಿಷಯ, ಅದು ಗೊತ್ತಾದ್ರೆ ಆ ಪುಟ್ಟಪ್ಪ ಹೊರಳಾಡ್ಕೊಂಡು ನಗೊಲ್ವೆ ಅಂತ ರಾಮದಾಸಪ್ಪನವರು ತಲೆತಲೆ ಚಚ್ಚಿಕೊಳ್ಳೋದಕ್ಕೆ ಶುರೂ ಮಾಡಿದರು.

ಅಷ್ಟೆಲ್ಲಾ ಹಲ್ಲಾಗುಲ್ಲಾ ನಡೀತಾ ಇದ್ರೂನೂವೆ ಇದುವರೆಗೂ ತುಟಿ ಪಿಟಕ್ ಅನ್ನದೀರ ಕೂತಿದ್ದ ರುದ್ರಪ್ಪ ಅತಿ ವಿನಯದಿಂದ

''ಜಾಯಿಂಟ್ ಸೆಕ್ರೆಟರೀಯವರು ತಪ್ಪು ತಿಳಕೊಳ್ಳೊಲ್ಲ ಅನ್ನೋ ಹಾಗಿದ್ರೆ ನಾನು ಒಂದು ಹೆಸರನ್ನ ಸೂಚಿಸೋಣ ಅಂದುಕೋತಾ ಇದ್ದೀನಿ...''

''ಅಯ್ಯೋ, ರಾಮನೆ! ಅದೇನೋ ಹೇಳತಾರಲ್ಲ, ಹಾಗಾಯಿತು ನಿಮ್ಮ ಕಥೆ... ನಾವು ಇಷ್ಟೊತ್ತಿನಿಂದ ಏನು ಮಾಡತಾ ಇದ್ದೀವಿ ಅಂದುಕೊಂಡಿದ್ದೀರಿ?...''

''ದೇವಸ್ಥಾನದ ಉದ್ದೇಶದ ಬಗ್ಗೆ ಅಷ್ಟೆಲ್ಲಾ ನೀವು ವಿವರಣೆ ಕೊಟ್ಟಮೇಲೆ ನನಗೆ ಅನ್ನಿಸತ್ತೆ, ನಮ್ಮ ಗುಡೀಲಿಡಬೇಕೂ ಅಂತಿರೋ ಸ್ವಾಮೀಗೆ ಪೈಪೋಟೀ ಪರಮಾರ್ಥ ಸ್ವಾಮಿ ಅಂತಲೇ ಹೆಸರಿಟ್ಟರೆ ಹ್ಯಾಗಿರತ್ತೆ?''



ನಮ್ಮ ರಾಜು ಹಲಸಿನ ಹಣ್ಣಿನ ಮೇಲೆ ಎಸ್ಸೆ ಬರೀಬೇಕಂತೆ.
ಸ್ವಲ್ಪ ಅವನಿಗೆ ಸಹಾಯ ಮಾಡ್ತೀಯಾಪ್ಪಾ?

# ಒಂದು ಲೇಟೆಸ್ಟ್ ಕಾಶೀ ಕಥೆ

– ಸಿ. ಆರ್. ಸತ್ಯ

ನಮ್ಮ ಕ್ಲಬ್‌ಮೆಂಬರ್ ಚಿದಂಬರರಾಯರು ಅರವತ್ತೆರಡು ವಯಸ್ಸಾದರೂ ಸ್ವಲ್ಪ ಜಾಲೀ ಮನುಷ್ಯ ಅಂತಾನೇ ಹೇಳಬಹುದು. ಈತ ಹಳೇ ಸಂಪ್ರದಾಯಗಳ ಹಾಗೂ ಮಾರ್ಡನಿಟಿ ಇವೆರಡರ ಅನ್ಯೋನ್ಯ ಸಮ್ಮಿಶ್ರಣ ಅಂದರೆ, ನಮ್ಮ ಕ್ಲಬ್ಬಿನ ಪಕೋಡಾ ಬೀರ್ ಕಾಂಬಿನೇಶನ್ ಮತ್ತು ಹೆಂಡತಿ ಮಾಡೋ ಕೋಸಂಬರಿ ಪಾಯಸ ಕಾಂಬಿನೇಶನ್ ಎರಡನ್ನೂ ಒಂದೇ ದಿನ ಯಾವ ತೊಂದರೆಯೂ ಇಲ್ಲದೆ ಸವಿಯೋ ಅಂತಹ ಪುಣ್ಯಾತ್ಮ.

ಇಂತಹ ಪುಣ್ಯಾತ್ಮನ ಸಂಸಾರದಲ್ಲಿ ಇದ್ದ ಒಂದೇ ಒಂದು ತೊಂದರೆ ಅಂದರೆ, ಚಿದಂಬರರಾಯರ ಹೆಂಡತಿ. ವಿಶಾಲಾಕ್ಷಿ ಅಂತ ಹೆಸರು. ಆಕೆಗೆ ಹೆಸರಿಗೆ ತಕ್ಕಹಾಗೆ ಇದ್ದದ್ದು ವಿಶಾಲವಾದ ಅಕ್ಷಿಗಳಲ್ಲ! ವಿಶಾಲವಾದ ದೇಹ, ಸಣ್ಣದಾಗಿರೋ ಕಣ್ಣುಗಳು. ಮುಂಗೋಪ ಅನ್ನೋದು ಆಕೆಯ ಹುಟ್ಟು ಸ್ವಭಾವ, ಕೋಪ ಬಂದರಂತೂ ಆ ಕಣ್ಣುಗಳು ಇನ್ನೂ ಚಿಕ್ಕದಾಗಿ, ರೆಪ್ಪೆ ಸಂದಿನಿಂದ ಲೇಸರ್ ಬೀಮ್‌ಗಳು ಚಿದಂಬರರಾಯರ ಮೇಲೆ ಬಿದ್ದರೆ, ರಾಯರು ಬೆಂಕಿ ಹತ್ತಿಕೊಂಡು ಅನಿಲವಾಗಿ ಅದೃಶ್ಯವಾಗೋದೊಂದೇ ಬಾಕಿ. ಇಷ್ಟಾದರೂ ರಾಯರು ಹೇಗೋ ಬದುಕಿಕೊಂಡು, ಸಂಸಾರ ನೀಗಿಕೊಂಡು, ಎರಡು ಮಕ್ಕಳನ್ನೂ ಮಾಡಿ, ಬೆಳಸಿ, ಇಬ್ಬರನ್ನೂ ಅಮೇರಿಕೆಗೆ ಕಳಿಸಿ, ರಿಟೈರೂ ಆಗಿ, ಕ್ಲಬ್ಬು ಮನೆ - ಮನೆ ಕ್ಲಬ್ಬು ಅಂತ ಕಾಲ ಕಳೆಯುತ್ತಿದ್ದರು.

ಅವರು ಕ್ಲಬ್ಬಿನಲ್ಲಿ ಅವರ ದೇಹದ ಒಂದು ಭಾಗವೇನೋ ಅನ್ನುವ ಹಾಗೆ ಇದ್ದ ಅವರದೇ ಒಂದು ಕೇನ್ ಚೇರಿನಲ್ಲಿ ಕೂತಾಗ - ಉಸ್ಸಪ್ಪಾ, ದೇವರೇ ನೀನೇ ಕಾಪಾಡಪ್ಪ ಅಂತ ಉದ್ಗಾರ ಮಾಡಿದಾಗಲೆಲ್ಲಾ - ಅವರ ಭಂಟರಾದ ನಾವುಗಳೂ ಕನಿಕರ ನೋವಿನಿಂದ ನರಳುತ್ತಿದ್ದೆವು. ನಮ್ಮ ನಮ್ಮ respective ಹೆಂಡತಿಯರೂ ನಮಗೆಲ್ಲಾ ತೊಂದರೆ ಕೊಡುತ್ತಿದ್ದರೂ, ಚಿದಂಬರರಾಯರ ಪ್ರಾಬ್ಲಮ್ಮು ಸ್ವಲ್ಪ ವಿಶೇಷವಾಗೇ ಇತ್ತು. ಥ್ಯಾಂಕ್ಸ್ ಟು ವಿಶಾಲಾಕ್ಷಮ್ಮ! "ದೇವರ ಸೃಷ್ಟಿಯಲ್ಲೇ ಆಗಿರುವ ಜ್ವಾಲಾಮುಖಿಗಳನ್ನೇ ತೆಗೆದುಕೊಳ್ಳಿ, ಒಂದು ವರ್ಷ ಬೆಂಕಿ ಉಗುಳಿದರೆ ಐವತ್ತು ವರ್ಷ ಬರೀ ಹೊಗೆ ಆಡಿಕೊಂಡು ಸುಮ್ಮನಿರುತ್ವೆ, ವಿಶಾಲಾಕ್ಷೀನೂ ದೇವರ ಸೃಷ್ಟಿ. ಆದರೆ ನಾನು ಮದುವೆ ಆದಾಗಿನಿಂದ ಅವಳು ಹೊಗೆ ಆಡಿಕೊಂಡಿರೋದೇ ನೋಡಿಲ್ಲ. ದಿನ ನಿತ್ಯ ಜ್ವಾಲಾಮುಖಿಯೇ ಆಗಿದ್ದರೆ, ಆ

ಯೊಗೇಗೆ ಎಲ್ಲಿ ಬರಬೇಕು oppurtunity?" ಅಂತ ರಾಯರು ಒಮ್ಮೆ ನಮ್ಮನ್ನ ಕೇಳಿದಾಗ ನಮಗೆಲ್ಲಾ ಕಣ್ಣಲ್ಲಿ ನೀರೇ ಬಂದ್ಬಿಡ್ತು.

ಈ ಸಂಕಟ ಪರಿಸ್ಥಿತಿಯಿಂದ ರಾಯರಿಗೆ ಮೋಕ್ಷವಿದೆಯೇ ಅಂತ ನಾವೆಲ್ಲಾ ತಲೆ ಬಿಸಿ ಮಾಡಿಕೊಂಡಿದ್ದಾಗ ನಮ್ಮ ಟೇಬಲ್‌ಮೇಟ್ ನರಸಿಂಗ, ಒಂದು ಐಡಿಯಾ! ಅಂತ ಕೂಗಿಕೊಂಡ. ಚಿದಂಬರರಾಯರು ನರಸಿಂಗನ ಕಡೆ ತಿರುಗಿ ''ಅದೇನು ಐಡಿಯಾ ಅಂತ ಬೇಗ ಬೊಗಳು. ನೀನು ಮುಂಚೆ ಹೇಳಿದ್ದ ಐಡಿಯಾಗಳನ್ನ ನಾನು ಈಡೇರಿಸೋದ್ರೊಳಗೆ ನನ್ನನ್ನು ಅವಳು ಸುಲಿದ ಸೌತೇಕಾಯಿ ಮಾಡಿದಾಳೆ. ಆವಾಗೆಲ್ಲಾ ಗಟ್ಟಿಮುಟ್ಟಾಗಿದ್ದೆ. ಹಾಗಾಗಿ ಹೇಗೋ ತಡ್ಕೊಂಡೆ. ಈಗೇನಾದರೂ ನಿನ್ನ ಐಡಿಯಾ ಹೆಚ್ಚು ಕಮ್ಮಿ ಆದರೆ ನನಗೆ ಉಳಿದಿರೋದು ಮ್ಯಾಸ್ಸೀವ್ ಹಾರ್ಟ್ ಅಟ್ಯಾಕ್ ಒಂದೇ!'' ಅಂದರು.

ನರಸಿಂಗ ಪೆದ್ದ ಆದರೂ, Sincere ಫೆಲೋ.

''ರಾಯರೇ, ನಿಮ್ಮ ಸೋದರಮಾವ ಕಾಶೀ ಯೂನಿವರ್ಸಿಟೀಲಿ ಕೆಲಸದಲ್ಲಿದ್ದಾನೆ ಅಂತ ಹೇಳಿದ್ದರಲ್ಲವೆ?'' ಅಂತ ಕೇಳಿದ.

''ಹೌದು!''

''ವಿಶಾಲಾಕ್ಷಮ್ಮನವರನ್ನ ಯಾವಾಗಲಾದರೂ ಕಾಶೀಗೆ ಕರ್ಕೊಂಡು ಹೋಗಿದೀರಾ?''

''ಅಲ್ಲಪ್ಪಾ, ನಮ್ಮನೆಯಿಂದ ಎಂಟನೇ ಕ್ರಾಸ್ ಮಾರ್ಕೆಟ್‌ಗೇ ಕರ್ಕೊಂಡು ಹೋಗೋಕ್ಕೆ ನನಗೆ ಇಷ್ಟು ವರುಷಗಳಲ್ಲಿ ಧೈರ್ಯ ಬಂದಿಲ್ಲಾ, ಇನ್ನೂ ಕಾಶೀ ತನಕ ಅವಳನ್ನ ನಾನು - ''

''Ideal ರಾಯರೇ, Ideal! ಕಾಶೀಗೆ ಕರ್ಕೊಂಡು ಹೋಗ್ತೀನಿ ಅಂತ ಅವರಿಗೆ ಒಂದು ಪ್ರಪೋಸಲ್ ಕೊಡಿ. ಅದೂ ಪ್ಲೇನ್‌ನಲ್ಲಿ. ದೆಹಲಿ ಮೂಲಕ. ನಿಮ್ಮ ಸೋದರಮಾವನ ಮನೇಲಿ ಒಂದು ತಿಂಗಳು ಇದ್ದು ಅಲ್ಲಿಂದ ಡಾರ್ಜಿಲಿಂಗ್ ಕಲ್ಕತ್ತಾ ಭುವನೇಶ್ವರ ಎಲ್ಲಾ ತೋರಿಸ್ತೀನಿ ಅಂತ ಹೇಳಿ.''

''ಏ ನರಸಿಂಗಾ, ಇಂಡಿಯನ್ ಏರ್‌ಲೈನ್ಸ್ ಚೇರ್‌ಮನ್ ನನ್ನ ಸ್ವಂತ ಮಾವ ಅಂತ ಅಂದ್ಕೊಂಡಿದೀಯಾ ಹೇಗೆ?'' ಅಂತ ರಾಯರು ಉದ್ವೇಗಿತರಾದರು.

''ನಾನು ಹೇಳೋದು ಪೂರ್ತಿ ಕೇಳಿ ರಾಯರೇ. ಟಿಕೆಟ್‌ಗಳೇನೋ ತೊಗೊಳ್ಳಿ ಆದರೆ ಅವನ್ನ ಉಪಯೋಗಿಸಬೇಕಾಗಿಲ್ಲ!'' ಅಂತ ಅಂದ ನರಸಿಂಗ. ಚಿದಂಬರರಾಯರು, ಪಾಪ, ಒಂದು ಬ್ಲಾಂಕ್ ಲುಕ್ ಕೊಟ್ಟರು. ನರಸಿಂಗ ತನ್ನ ಪ್ಲಾನ್ ಬಗ್ಗೆ ಮುಂದುವರಿಸಿದ:

''ಪ್ಲೇನ್‌ನಲ್ಲಿ ಕಾಶಿಗೆ ಹೋಗಿ ಸೋದರಮಾವನ ಮನೇಲಿ ಕ್ಯಾಂಪ್ ಹಾಕಿ ಎರಡು ದಿನಗಳು ಕಳೀಲಿ. ನಾನೇ ಇಲ್ಲಿಂದ ಒಂದು ಟೆಲಿಗ್ರಾಮ್ ಕಳಿಸ್ತೀನಿ. ಯಾವುದೋ ಕನ್‌ಸಲ್ಟೆನ್ಸಿ ಕೇಸು. ನೀವು ಮಾತ್ರ ಅರ್ಜೆಂಟಾಗಿ ಬೆಂಗಳೂರಿಗೆ ವಾಪಸ್ ಬನ್ನೀ ಅಂತ. ನೀನು ಇಲ್ಲೇ ಇರಮ್ಮ. ನನ್ನ ಪ್ಲೇನ್ ಟಿಕೆಟ್ಟೂ ನಿನ್ನ ಹತ್ತಿರಾನೇ ಇರಲಿ. ನಾನು ಬೆಂಗಳೂರಿಗೆ ಟ್ರೈನ್‌ನಲ್ಲಿ ಹೋಗಿ ಕನ್ಸಲ್ಟೆನ್ಸಿ ಮುಗಿಸಿಕೊಂಡು ಇನ್ನೊಂದು ಎರಡು ವಾರದಲ್ಲಿ ಬರ್ತೀನಿ ಅಂತ ಹೇಳಿ ನೀವು ಇಲ್ಲಿಗೆ ವಾಪಸ್ ಬಂದ್ಬುಡಿ.''

''ಬಹಳ ಒಳ್ಳೇ ಪ್ಲಾನು, ಆಮೇಲೆ?'' ಅಂತ ವ್ಯಂಗ್ಯವಾಗಿ ನಾವೆಲ್ಲಾ ಕೇಳಿದ್ವಿ

ನರಸಿಂಗ ತನ್ನ ಪೀಕ್ ಪರಫಾರ್ಮೆನ್ಸ್ ಅನ್ನೋಹಾಗೆ ಅಂದ:

''ಆಮೇಲೇನು? ನೀವು ಇಲ್ಲೇ ಹಾಯಾಗಿರಿ ರಾಯರೆ. ನಿಮ್ಮ ಅಮ್ಮಾವರು ಕಾಶೀಲೇ ಇರಲಿ. ಈಗ ಬರ್ತೀನಿ, ನಾಳೆ ಬರ್ತೀನಿ ಅಂತ ಒಂದೆರಡು ತಿಂಗಳಾದ್ರೂ ತಳ್ಳಿ. ಸ್ವಲ್ಪ ದಿನ ಬಿಟ್ಟು ನಾನು ಬರೋದು ಲೇಟಾಗುತ್ತೆ. ನನ್ನ ಏರ್ ಟಿಕೆಟ್‌ನ ಸೋದರತ್ತೆ ಹೆಸರಿಗೆ ಬದಲಾಯಿಸಿ ನೀವೇ ಡಾರ್ಜಿಲಿಂಗ್ ಕಲ್ಕತ್ತಾ ನೋಡ್ಕೊಂಡು ಬನ್ನಿ. ನಾನು ಆಮೇಲೆ ಬಂದು ಕರ್ಕೊಂಡು ಹೊಗ್ತೀನಿ ಅಂತ ಅನ್ನಿ. ಕಾಶೀ ವಿಶ್ವೇಶ್ವರನ ದರ್ಶನ ಮಾಡಿ ದಿನ ನಿತ್ಯ ಗಂಗಾ ಸ್ನಾನ ಮಾಡಿ ಅಂತೆಲ್ಲಾ ಹುರಿದುಂಬಿಸಿ. In the meantime, ಇಲ್ಲಿ ನಮ್ಮ ಜೊತೆ ಒಂದೆರಡು ತಿಂಗಳಾದ್ರೂ ಹಾಯಾಗಿರಿ. ಊಟ ತಿಂಡಿ ಹೇಗೋ ಮ್ಯಾನೇಜ್ ಮಾಡ್ಕೊಂಡರೆ ಆಯ್ತು. ಕಾಶೀ ವಿಶ್ವೇಶ್ವರನ ಅನುಗ್ರಹಾನೂ ನಿಮಗೆ ಸಿಗುತ್ತೆ. ಕಾಶೀಗೆ ಹೋಗಿ ನಿಮಗೆ ''ಇಷ್ಟವಾದ'' ಹೆಂಡತಿಯನ್ನೇ ಬಿಟ್ಟು ಬಂದಿದೀರಾ, ಎಂತಹ ತ್ಯಾಗಿ ಅಂತ ನಿಮ್ಮನ್ನ ನಾವುಗಳೂ ಕೊಂಡಾಡಬಹುದು!''

ರಾಯರಿಗೆ ಐಡಿಯಾ ಹಿಡಿಸ್ತೂ ಅಂತ ಕಾಣುತ್ತೆ, Done!" ಅಂತ ತಮ್ಮ ಕೇನ್ ಚೇರಿನಿಂದ ಎದ್ದು ಪ್ಲಾನ್ ಪರಿಪಾಲಿಸೋಕ್ಕೆ ಅಂತ ಮನೇಗೆ ಹೊರಟೇಬಿಟ್ರು.

ಇಲ್ಲಿಂದ ಮುಂದೆ ನಡೆದ ಕೆಲವು ಸಂಗತಿಗಳೆಲ್ಲಾ ಸ್ವಲ್ಪ ನಮಗೆಲ್ಲಾ hazy ಆಗೇ ಕಾಣ್ತದೆ. ಆದರೂ ಕೆಲವು ಮೈಲ್‌ಸ್ಟೋನ್ಸ್‌ಗಳನ್ನು ನಮಗೆ ತಿಳಿದ್ದಾಗೆ ಒಪ್ಪಿಸ್ತೀವಿ.

ರಾಯರೂ, ವಿಶಾಲಾಕ್ಷಮ್ಮನವರೂ, ಪ್ಲಾನ್ ಮಾಡಿ, ಮನೆ ಬೀಗ ಹಾಕಿ, ಪಕ್ಕದ ಮನೆಯವರಿಗೆ ಬೀಗದ ಕೈ, ಮನೆ ಕ್ಷೇಮವನ್ನ ಒಪ್ಪಿಸಿ ದೆಹಲಿ ಬೆನಾರಸ್ flight ಗೆ ಬೆಂಗಳೂರು ಏರ್‌ಪೋರ್ಟಿಗೆ ರಿಪೋರ್ಟ್ ಆದರು. ಬೀಳ್ಕೊಡೋಕ್ಕೆ ನಾವೂ ಹೋಗಿದ್ವಿ, ಚಿದಂಬರ ರಾಯರು ಆಗಲೇ ಸುಸ್ತಾಗಿದ್ದರು. ಪ್ರಯಾಣ

ಸಿದ್ಧತೆಗಳ ಬಗ್ಗೆ ಏನೇನು ಜಗಳ ಕಾದಿದ್ರೋ? ವಿಶಾಲಾಕ್ಷಮ್ಮನವರು ನಾವೆಲ್ಲಾ ಅಲ್ಲಿ ನಿಂತಿದ್ದು ನೋಡಿ ತಮ್ಮ ಲೇಸರ್ ಬೀಮ್‌ನ ನಮ್ಮ ಮೇಲೆ ಬಿಟ್ರು. ಸಧ್ಯ ನಾವ್ಯಾರೂ ಬೆಂಕಿ ಹೊತ್ಕೊಳ್ಳಲಿಲ್ಲ. ರಾಯರು ನರಸಿಂಗನ ಹತ್ತಿರ ಬಂದು ''ಟೆಲಿಗ್ರಾಮ್ ಮರೀಬ್ಯಾಡಾ'' ಅಂತ ಪಿಸುರಿದರು.

ರಾಯರು ಕಾಶೀ ತಲುಪಿದ್ದಾಯಿತು. ಸೋದರ ಮಾವನ ಮನೇಲಿ ಕ್ಯಾಂಪ್ ಮಾಡಿದ್ದೂ ಆಯಿತು. ನರಸಿಂಗ ಎರಡು ದಿನ ಆದಮೇಲೆ ಟೆಲಿಗ್ರಾಂ ಕಳಿಸಿದ್ದೂ ಆಯಿತು. ರಾಯರು ಪ್ಲಾನ್ ಪ್ರಕಾರ ತಮ್ಮ ಮೂವತ್ತು ವರ್ಷದ ದಾಂಪತ್ಯ ಜೀವನದಲ್ಲಿ ಮೊದಲ ಬಾರಿಗೆ ಹೆಂಡತಿಯಿಂದ ಕಳಚಿಕೊಂಡು, ಹಾಯಾಗಿ, ಬೆಂಗಳೂರು ಕಡೆಗೆ ಟ್ರೈನ್ ಹತ್ತಿದರು. ಮೂರು ದಿನದ ಪ್ರಯಾಣ, ಟ್ರೈನ್‌ನಲ್ಲಿ ಒಳ್ಳೇ ಊಟ ತಿಂಡಿ ಹೊಡೆದರು. ಕಾರಾಗೃಹವಾಸದಿಂದ ತಪ್ಪಿಸಿಕೊಂಡ ಹಾಗಿತ್ತು ಅವರ ಮನಸ್ಸು. ಪ್ರಯಾಣದ ಸುಸ್ತು ಮನೋಲ್ಲಾಸದಿಂದ ಮುಚ್ಚೇ ಹೋಯಿತು, ಬೆಂಗಳೂರು, ಕ್ಲಬ್ಬು, good old ನರಸಿಂಗ God bless him ಅಂತೆಲ್ಲಾ ಯೋಚನೆ ಮಾಡ್ಕೊಂಡ್ರು, ಎರಡು ದಿನಗಳಿಂದ ಹೆಂಡತಿ ಬೈಗಳಗಳು ಇಲ್ಲದೇ ಅವರ ಆರೋಗ್ಯವೂ ಸುಧಾರಿಸಿದ ಹಾಗೆ ಕಂಡು ಅವರ ಮುಖದಲ್ಲಿ ಏನೋ ಒಂದು ವರ್ಚಸ್ಸು ಬಂದಿತ್ತು.

ನಾವೆಲ್ಲಾ ಬೆಂಗಳೂರು ರೈಲ್ವೇ ಸ್ಟೇಶನ್‌ಗೆ ರಾಯರನ್ನು ರಿಸೀವ್ ಮಾಡೋಕ್ಕೆ ಹೋಗಿದ್ವಿ, ನಮ್ಮನ್ನ ನೋಡಿ ರಾಯರಿಗೆ ಖುಶಿಯೋ ಖುಶಿ! ""Straight to the club boys! we will toast!" ಅಂತ ಅಂದ್ರು. ನೇರ ಕ್ಲಬ್‌ಗೆ ಹೋದ್ವಿ, ರಾತ್ರಿ ಆಗೋತನಕ ಪಕೋಡ ಬೀರ್ ಕಾಂಬಿನೇಶನ್ನು ಚೆನ್ನಾಗಿ ಕೆಲಸ ಮಾಡ್ತು. ನಮಗೆ ತಿಳಿದ್ಹಾಗೆ ನಾವೂನೂ ಮೊದಲನೇ ಬಾರಿಗೆ ರಾಯರು ಸಿಳ್ಳೆ ಹೊಡೆದು ಯಾವುದೋ ಹಾಡನ್ನ ಗುಂಗುಟ್ಟೋದು ಕೇಳಿದ್ವಿ. ಸರಿ ರಾತ್ರಿ ಹತ್ತು ಘಂಟೆ ಆಯ್ತು. ""Back home gents! will meet tomorrow" ಅಂತ ರಾಯರು ಎದ್ದರು. ನರಸಿಂಗನ ಅಂಬಾಸಿಡರ್‌ನಲ್ಲಿ ಅವರನ್ನ ಮನೆಗೆ ಡ್ರಾಪ್ ಮಾಡೋಣ ಅಂತ ನಾವೆಲ್ಲಾ ಏರಿದೆವು. ಕಾರು ರಾಯರ ಮನೆ ಮುಂದೆ ಬರ್ತಾನೆ ನಮ್ಮೆಲ್ಲರ ಹಾರ್ಟುಗಳು ಒಳ್ಳೆ ಕೋ - ಆಪರೇಶನ್‌ನಿಂದ ಒಂದೇ ಏಟಿಗೆ ಟಪ್ ಅಂತ ನಿಂತೇ ಹೋದ್ವು!

ಚಿದಂಬರರಾಯರ ಮನೇಲಿ ದೀಪ ಉರೀತಿತ್ತು. ಬಾಗಿಲು ತೆಗೆದಿತ್ತು. ಹೊಸಲಲ್ಲಿ ಇನ್ಯಾರು ಅಂದ್ಕೊಂಡ್ರಿ - ತಾಜಾ ವಿಶಾಲಾಕ್ಷಮ್ಮನವರೇ - ನಿಂತ್ಕೊಂಡು ಜೋರಾಗಿ ಮಾತಾಡ್ತಿದ್ರು. ರಾಯರಿಗಿಂತ ನರಸಿಂಗನಿಗೇ ಯಾಕೋ ಕೈಕಾಲು ನಡಗಿ ಬೆವರು ಕಿತ್ಕೊಂಡ್ತು.

''ಇದೇನೂ... ವಿಶಾಲಾಕ್ಷಿ? ನೀನು... ಇಲ್ಲಿ...? ಕಾಶೀ, ಕಲ್ಕತ್ತಾ, ಡಾರ್ಜಿಲಿಂಗ್... ನರಸಿಂಗೂ...'' ಅಂತ ಏನೇನೋ ಒದರಿದರು ಶಾಕ್‌ನಲ್ಲಿ.

ವಿಶಾಲಾಕ್ಷಮ್ಮನವರ ಬಾಯಲ್ಲಿ (ನಮಗೆ ತಿಳಿದಿರೋ ಹಾಗೆ ಲೈಫ್‌ನಲ್ಲಿ ಮೊದಲನೇ ಸಲ) ಒಂದು ಸಂತಸದ ನಗೆ ಬೀರಿತ್ತು. ''ಸಧ್ಯ ಬಂದಿಳಿದರಲ್ಲ, ಯಾವತ್ತು ಬರ್‍ತೀರೋ ಅಂತಿದ್ದೆ. ನೀವು ಕಾಶಿಯಿಂದ ಬೆಂಗ್ಳೂರಿಗೆ ಹೊರಟಮೇಲೆ ನಾನು ಪಮ್ಮಿಗೆ (ಪರಿಮಾಳ ಅವರ ಅಮೇರಿಕಾ ಮಗಳು) ಫೋನ್ ಮಾಡಿದ್ದೆ. ಕಾಶೀನಲ್ಲಿ ಇದ್ದೀವಿ ಅಂತ ಹೇಳೋಕ್ಕೆ. ತಕ್ಷಣ ಅವಳು ಮಮ್ಮಿ ನಾನು ಫ್ಯಾಮಿಲಿವೇನಲ್ಲಿದ್ದೀನಿ. ಅಲ್ಲಿಗೇ ಹೆರಿಗೇಗೆ ಬರ್‍ತಿದೀನಿ, ನಾಡಿದ್ದೇ ಬೆಂಗ್ಳೂರಿಗೆ ಡೈರೆಕ್ಟ್‌ಫ್ಲೈಟ್‌ನಲ್ಲಿ ತಲುಪ್ತಿದೀನಿ ಅಂತ ಅಂದಳು. ತಕ್ಷಣ ನಾನೂ ದೆಹಲಿಗೆ ಬಂದು ಅಲ್ಲಿಂದ ಏರಿಯಿಲ್‌ಲೈನ್ಸ್‌ನಲ್ಲಿ ನೆನ್ನೇನೇ ಬಂದ್ಬುಟ್ಟೆ'' ಅಂತ ವಿವರಿಸಿದರು.

ಚಿದಂಬರರಾಯರು ಪೆದ್ದುಪೆದ್ದಾಗಿ ನಮ್ಮ ಕಡೆ, ಆಕೆಯ ಕಡೆ ನೋಡ್ತಿದ್ರು. ತಕ್ಷಣ ವಿಶಾಲಾಕ್ಷಮ್ಮನ ಕೋಪ ಮಾಮೂಲಾಗೆ ಕಾಣಿಸಿಕೊಂಡು, ''ಇವರುಗಳ ಕಂಪೆನಿ (ನಮ್ಮ ಕಡೆ ನೋಡುತ್ತ) ಹಾಳಾಯ್ತು. ಒಳಗೆ ಬನ್ನಿ ಪಮ್ಮಿ ನಿಮ್ಮನ್ನ ನೋಡೋಕ್ಕೆ ಕಾಯ್ತಿದಾಳೆ'' ಅಂತ ಗಡುಸಾಗೇ ಒಳಗೆ ಹೋದರು.

ಪೆಚ್ಚಾಗಿ ಅವರ ಹಿಂದೆ ಚಿದಂಬರರಾಯರೂ ಹೋದರು.

''ಯಾಕೋ ನನಗೇ ಮ್ಯಾಸಿವ್ ಹಾರ್ಟ್ ಅಟ್ಯಾಕ್ ಆಗೋ ಚಿನ್ಹೆಗಳು ಇವೆ ಕಣ್ರಪ್ಪ. ನಡೀರಿ ಮುಂಚೆ ಇಲ್ಲಿಂದ ಕಾಲು ಕೀಳೋಣ'' ಅಂತ ಅಂಬಾಸಿಡರ್ ಕಾರ್‌ನ ನೇರವಾಗಿ ನಾಲ್ಕನೇ ಗೇರ್‌ನಲ್ಲೇ ಸ್ಟಾರ್ಟ್ ಮಾಡ್ಕೊಂಡು ನರಸಿಂಗ ಹೊರಟ.

ಇದಾದ ಮೇಲೆ ಹದಿನೈದು ದಿನಗಳಿಂದ ರಾಯರು ಕ್ಲಬ್‌ಕಡೆ ತಲೇನೇ ಹಾಕಿಲ್ಲ. ಅವರ ಫೇಮಸ್ ಕೇನ್‌ಚೇರ್ ಖಾಲಿಯಾಗೇ ಕೂತಿದೆ. ನರಸಿಂಗನೂ ಕಾಶೀ ವಿಶ್ವನಾಥ! ಅಂತ ನಿಟ್ಟುಸಿರು ಬಿಟ್ಕೊಂಡು ಮಂಕಾಗಿ ಕ್ಲಬ್ಬಿನಲ್ಲೇ ಓಡಾಡ್ತಿದಾನೆ....

ಬದುಕುವ ವಿದ್ಯೆ

''ಅಧಿಕಾರವಿದ್ದಾಗ ಕೊಡಸ್ದೇ ಹೋದರೆ
ಸೊಸೆಗೊಂದು ಪೆಟ್ರೋಲ್ ಬಂಕನ್ನ
ಜನ ಎಲ್ಲಾ ನಗಾಕಿಲ್ಲವೇನೋ
ಹರದನಹಳ್ಳಿ ಮಂಕಣ್ಣ
(ಯಾರನ್ನೂ ಕುರಿತು ಬರೆದದ್ದಲ್ಲ)

– ಶೀನೂ

# ಕಾರ್ಲ್ ಮಾರ್ಕ್ಸ್ ಮತ್ತು ನಾನು

**– ಎಚ್. ಗೋಪಾಲಕೃಷ್ಣ**

ತುಂಬಾ ಅಕಸ್ಮಾತ್ತಾಗಿ ಒಂದು ದಿನ ರೈಲ್ವೆ ಸ್ಟೇಷನ್ನಿನಲ್ಲಿನ ತೂಕದ ಮೆಷೀನ್ ಹತ್ತಿ ಒಂದು ರೂಪಾಯಿ ತೂರಿಸಿದೆ. ಐದು ಸೆಕೆಂಡ್‌ಗಳಲ್ಲಿ ನನ್ನ ತೂಕದ ಮಾಹಿತಿ ಬಂತು - ನೂರ ಇಪ್ಪತ್ತೈದು ಕೇಜಿ ಅಂತ! ಎರಡು ವರ್ಷದ ಹಿಂದೆ ಬರೇ ನೂರು ಕೇಜಿ ತೂಗುತ್ತಿದ್ದವನು ಈಗ ನೂರ ಇಪ್ಪತ್ತೈದು ಅಂದರೆ - ನನ್ನ ಸ್ವಪ್ರಗತಿ ಬಗೆಗೆ ಒಂದು ರೀತಿಯ ಹೆಮ್ಮೆ ಉಂಟಾಯಿತು. ಹೆಮ್ಮೆ ಭರಾಟೆ ಕೊಂಚ ತಗ್ಗಿದ ನಂತರ ದಿನಕ್ಕೆ ಕನಿಷ್ಠ ಒಂದುಗಂಟೆ ನಡಿ ಅಂತ ಮೂರನೇ ಮೆದುಳು - ಇದಕ್ಕೆ ಜೀವಭಯ ಜಾಸ್ತಿ ಅಂತೆ - ಸಜೆಸ್ಟ್ ಮಾಡಿತು. ಅದರಂತೆ ಬೆಳಿಗ್ಗೆ ಹೊತ್ತು ನಾಲ್ಕು ಮೈಲಿ ದೂರವಿರುವ ಕಾರ್ಖಾನೆಗೆ ನಡೆಯಲು ಆರಂಭಿಸಿದೆ.

ಕಾರ್ಖಾನೆಗೆ ನಡೆದು ಹೋಗಲೇಬೇಕಾಗಿರುವ ರಸ್ತೆಯ ಒಂದು ಮಗ್ಗಲು ದೊಡ್ಡ ಕೆರೆ ಇದೆ. ಒಂದೂವರೆ ಮೈಲು ಕೆರೆ ರಸ್ತೇಲಿ ಸಾಗಿ ನಂತರ ಎಡಪಕ್ಕದಲ್ಲಿ ತಿರುಗಿದರೆ ಕಾರ್ಖಾನೆ ಕ್ವಾರ್ಟರ್ಸ್‌ಗಳ ಸರಣಿ ಆರಂಭ. ಕ್ವಾರ್ಟಸ್ ಮೂಲಕ ಕಾರ್ಖಾನೆಯ ಹಿಂಬಾಗಿಲು ಸೇರಿದರೆ ಕಾರ್ಖಾನೆ ಸೇರಿದ ಹಾಗೇನೇ. ಈ ಕೆರೆ ರಸ್ತೆ ಮೇಲೇನೇ ನಮ್ಮೂರಿನ ನಗರ ಸಾರಿಗೆ ಬಸ್ಸುಗಳ ಪ್ರಯಾಣ. ಪ್ರತಿದಿನ ಬೆಳಿಗ್ಗೆ ನಡೆಯಲು ಆರಂಭಿಸಿದ ನಂತರ ಈ ಕೆರೆ ರಸ್ತೆ ನನಗೆ ಅನೇಕ ರೀತಿಯ ಜ್ಞಾನಾರ್ಜನೆ ಮಾಡಿದೆ. ಕೆರೆ ಅಂಚಿನಲ್ಲಿ ಕೂತಿರುವ ಕೊಕ್ಕರೆಗಳು, ಆಗ ತಾನೇ ಉದಯಿಸುತ್ತಿರುವ ಕೆಂಪನೆ ಸೂರ್ಯ, ಸುತ್ತಮುತ್ತಲ ಮರಗಿಡಗಳಿಂದ ಕೂಗಿ ಕಲರವ ಎಬ್ಬಿಸಿ ಹಾರಾಡುವ ಹಕ್ಕಿಗಳು... ಇವೆಲ್ಲ ನನ್ನ ಕವಿ(?) ಹೃದಯಕ್ಕೆ ತಂಪು ನೀಡಿದ್ದರೆ ಮತ್ತೊಂದು ಅನುಭವ ಬಹುಶಃ ಯಾರಿಗೂ ಆಗಿಲ್ಲದಿರುವಂತಹುದು. ಬೆಳಗಿನ ಜಾವದ ವಾಕಿಂಗ್ ಕುರಿತು, ನಾಯಿ ವಾಕಿಂಗು ಕುರಿತು, ಹಕ್ಕಿಗಳ ಕಲರವ ಕುರಿತು, ಕೊಕ್ಕರೆಗಳ ಚೆಂದ ಕುರಿತು, ಕೆರೆ ಅಂಗಳದ ತಂಗಾಳಿ ಕುರಿತು ವಾಚಕ ಮಹಾಶಯರು ಈಗಾಗಲೇ ಕೋಟ್ಯಾಂತರ ಬಾರಿ ಕೇಳಿದ್ದೀರಿ ಮತ್ತು ಓದಿದ್ದೀರಿ. ಇವೆಲ್ಲಕ್ಕಿಂತಲೂ ವಿಶಿಷ್ಟವಾದ ಅನುಭವದ ಒಡೆಯ ನಾನು ಅಂದರೆ ನೀವು ನಂಬಲಿಕ್ಕಿಲ್ಲ. ಈಗ ಈ ಅನುಭವ ನಿಮಗೆ ಹೇಳಲೇಬೇಕು. ನಮ್ಮ ವಿದ್ಯಾರಣ್ಯಪುರಕ್ಕೆ ನಗರ ಸಾರಿಗೆಯ ಮೊದಲನೇ ಬಸ್ಸು ಬೆಳಿಗ್ಗೆ ಐದಕ್ಕೋ ಐದೂ ಮುಕ್ಕಾಲಿಗೋ ಬಂದರೆ ಕೊನೆಯ ಬಸ್ಸು ರಾತ್ರಿ ಹನ್ನೆರಡರ ಸುಮಾರಿಗೆ ಬರುತ್ತೆ. ಅಂದರೆ ಕತ್ತಲಿನಲ್ಲೇ ಕೊನೆಯ ಹಾಗೂ

ಮೊದಲಿನ ಎರಡೂ ಪ್ರಯಾಣಗಳು. ಹೇಳಿ ಕೇಳಿ ನಮ್ಮ ಪುರ ಕಾರ್ಲ್‌ಮಾರ್ಕ್ಸ್‌ನ ಹಿಂಬಾಲಕರಿಂದ ತುಂಬಿರುವಂತಹುದು. ಅಂದರೆ ರಕ್ತ ಬಸಿಯುವ ಜನರಿಂದ. ಇನ್ನೂ ಸ್ಪಷ್ಟವಾಗಿ ಹೇಳಬೇಕೂಂದರೆ ಕಾರ್ಖಾನೆ ಕಾರ್ಮಿಕರಿಂದ. ಬಡ ಕೂಲಿ ಕಾರ್ಮಿಕರಾಗಿರುವುದರಿಂದ ನಮಗೆ ಸರಿ ರಾತ್ರಿಯಲ್ಲಿ ಅಥವಾ ನಸು ಬೆಳಕಿನಲ್ಲಿ ಬೇರೆ ವಾಹನಗಳು ಕೈಮೀರಿದ್ದು ಆದ್ದರಿಂದ ಬಿ.ಟಿ.ಎಸ್. ಬಸ್ಸೇ ನಮಗೆ ಗತಿ. ಈ ಹಿನ್ನೆಲೆ ನಿಮ್ಮ ಮನಸ್ಸಿನಲ್ಲಿ ಇರಲಿ.

ತೂಕದ ಮೆಷೀನು ನೂರ ಇಪ್ಪತ್ತೈದು ಕೇಜಿ ತೋರಿಸಿದ ನಂತರ ಮೊದಲನೇ ದಿವಸ ವಾಕಿಂಗ್ ಹೊರಟೆ - ಕಾರ್ಖಾನೆಗೆ. ಕೆರೆ ರಸ್ತೆಗೆ ಬಂದ ಹಾಗೆ ಮೊದಲು ಒಂದು ಹತ್ತು ಪೈಸೆ ನಾಣ್ಯ ಕಾಣಿಸಿತು. ಬಗ್ಗಿ ಅದನ್ನ ತಗೋ ಅಂತ ಮನಸ್ಸು ನಿರ್ದೇಶನ ನೀಡಿತು. ಅದನ್ನು ಹೆಕ್ಕಲು ಬಗ್ಗಿದೆ. ಕಾರ್ಲ್‌ಮಾರ್ಕ್ಸ್ ಅಡ್ಡಬಂದ. ''ಯಾರದ್ದೋ ದುಡ್ಡು. ಅದನ್ನ ತೆಗೆದುಕೊಳ್ಳುವುದಕ್ಕೆ ನಿನಗೇನು ಹಕ್ಕಿದೆ?'' ಅಂತ ಕೇಳಿದ. ಮನಸ್ಸು ಕಾರ್ಲ್‌ಮಾರ್ಕ್ಸ್‌ಗೆ ಹೀಗೆ ಉತ್ತರಿಸಿತು 'ಸರಿ ನನಗೆ ಹಕ್ಕಿಲ್ಲ ಅಂತ ಹಾಗೇ ಇಲ್ಲೇ ಬಿಡ್ತೀನಿ. ಅದನ್ನ ಕಳೆದುಕೊಂಡವನು ಮತ್ತೆ ಹುಡುಕಿಕೊಂಡು ಬಂದು ಇದನ್ನ ತಗೋತಾನೋ?'

ಕಾರ್ಲ್ ಮಾರ್ಕ್ಸ್ ವಿಚಲಿತನಾದ. ಅಕಸ್ಮಾತ್ ಹಣ ಕಳೆದುಕೊಂಡವನು ಮತ್ತೆ ಹುಡುಕಿ ಬಂದರೆ ಅದು ಅವನಿಗೆ ಸಿಗಬೇಕು... ಸರಿನಪ್ಪ ಮಾರ್ಕ್ಸ್. ನೀನು ಹೇಳಿದೆ ಅಂತ ಈ ನಾಣ್ಯ ಇಲ್ಲೇ ಬಿಡ್ತೀನಿ ಅಂತ ಇಟ್ಕೋ. ಹಣ ಕಳೆದುಕೊಂಡವನು ಇದನ್ನ ಹುಡುಕಿ ಬರುಲ್ಲ ಅಂತ ಇಟ್ಕೋ. ಈ ಹಣ ಬೇರೆ ಯಾರೋ ಶ್ರೀಮಂತನಿಗೆ ಸಿಕ್ಕಿತು ಅಂತ ಪ್ರಿಸ್ಯೂಮ್ ಮಾಡು. ಆಗ ನಿನ್ನ ಯೋಚನೆ ಧಾಟಿಯಿಂದ ಜಗತ್ತಿನಲ್ಲಿ ಒಬ್ಬ ಶ್ರೀಮಂತನನ್ನ ಮತ್ತಷ್ಟು ಶ್ರೀಮಂತನನ್ನಾಗಿ ಮಾಡಿದ ಹಾಗಾಗುತ್ತೆ. ನಿನ್ನ ಥಿಯರಿ ಮುಗ್ಗರಿಸಿ ಪಲ್ಟಿ ಹೊಡೆದು ಬಿಡುತ್ತೆ. ಇದಕ್ಕೇನು ಹೇಳುತ್ತೀ...

ಕಾರ್ಲ್‌ಮಾರ್ಕ್ಸ್ ಸಂಪೂರ್ಣ ತಬ್ಬಿಬ್ಬಾದ ಅಂತ ಅವನು ಮಾತಿಗೆ ತಡವರಿಸಲು ಆರಂಭಿಸಿದಾಗಲೇ ಅನಿಸಿತು. ಒಂದು ಸಲ್ಯೂಷನ್‌ನ ಆತನೇ ನೀಡಿದ ಈ ಹಣ ತಗೋಬಹುದು. ಆದರೆ ಇದರ ಸದ್ವಿನಿಮಯ ಆಗಬೇಕು.

ಮನಸ್ಸು ಗೆಲುವಿನ ನಗೆ ನಕ್ಕಿತು. 'ಸರಿ ಹಾಗೇ ಆಗಲಿ. ಈ ಕಾಸನ್ನ ಪ್ರತಿ ಶುಕ್ರವಾರ ನಮ್ಮ ಸೆಕ್ಷನ್ನಿನಲ್ಲಿ ನಡೀತದಲ್ಲಾ ದೇವರ ಪೂಜೆ - ಅದರ ಮಂಗಳಾರತಿ ತಟ್ಟೆಗೆ ಹಾಕಿಬಿಡ್ತೀನಿ.

'ಮಂಗಳಾರತಿ ತಟ್ಟೆಗೆ ಹಾಕಿ ಬಡವರ ದುಡ್ಡಿನಲ್ಲಿ ನೀನು ಪುಣ್ಯ ಕಟ್ಕೋತೀಯಾ?'.. ಅಂತ ಮಾರ್ಕ್ಸ್ ಗದರಿಸಿದ.

‘ಹಾಗಿದ್ದರೆ ಏನು ಮಾಡಲಿ?’ ಅಂತ ಮನಸ್ಸು ಕೇಳಿತು.

ಮಾರ್ಕ್ಸ್ ಒಂದು ನಿಮಿಷ ಚಿಂತಿಸಿದ ‘ಹೇಗಿದ್ದರೂ ಈ ದೇಶದಲ್ಲಿ ಬಡವರು ಶೇ. ಎಪ್ಪತ್ತರಷ್ಟು ಜನ ಇದಾರಂತೆ. ಅವರಲ್ಲಿ ಯಾರಿಗಾದರೂ ನೀಡು...’

‘ಅಲ್ಲ ಮಾರ್ಕ್ಸ್? ಬಡವರನ್ನು ಹೇಗೆ ಐಡೆಂಟಿಫೈ ಮಾಡೋದು? ಯಾರೂ ನಾನು ಬಡವ ಅಂತ ಬೋರ್ಡು ಹಾಕಿರೋದಿಲ್ಲವಲ್ಲ?’

ಮಾರ್ಕ್ಸ್ ಎರಡೂವರೆ ನಿಮಿಷ ಚಿಂತಿಸಿದ ‘ಸರಿ ಭಿಕ್ಷುಕರಿಗೆ ದಾನ ಮಾಡಬಹುದು ಹಾಗೆ ಮಾಡು’ ಅಂತ ನಿರ್ದೇಶಿಸಿದ.

ಈ ಸಂಪೂರ್ಣ ಡಯಲಾಗು ನಾನು ಬಗ್ಗಿ ನಾಣ್ಯ ಹೆಕ್ಕುವಷ್ಟರಲ್ಲೇ ನಡೆದು ಹೋಯಿತು. ಇನ್ನೊಂದು ಹದಿನೈದು ಹೆಜ್ಜೆ ಮುಂದೆ ಎಂದರೆ ಮತ್ತೊಂದು ನಾಣ್ಯ - ಈ ಬಾರಿ ಅದು ಐದು ಪೈಸೆ. ಈ ಸಲವೂ ನಾಣ್ಯ ಹೆಕ್ಕಿ ತೆಗೆದೆ. ಕಾರ್ಲ್ ಮಾರ್ಕ್ಸ್ ತೆಪ್ಪಗಿದ್ದ. ಅವತ್ತು ಒಟ್ಟು ಐದು ಹತ್ತು ಪೈಸೆ ಮೂರು ಐದು ಪೈಸೆ ನಾಣ್ಯ ಸಿಕ್ಕಿದವು. ಈ ಕಾಸು ಇಲ್ಲಿ ಹೇಗೆ ಬಿದ್ದಿರುತ್ತೆ ಅಂತ ಚಿಂತಿಸಿದೆ. ರಾತ್ರಿ ಅಥವಾ ಬೆಳಿಗ್ಗೆ ಬಸ್ಸಿನಲ್ಲಿ ಓಡಾಡುವ ಜನರ ಕೈನಿಂದಲೋ ಜೇಬಿನಿಂದಲೋ ಬಸ್ಸಿನ ಕುಲುಕಾಟದಿಂದ ಈ ನಾಣ್ಯಗಳು ಬಿದ್ದಿವೆ ಅಂತ ಅರ್ಥೈಸಿದೆ. ಕಾರ್ಖಾನೆ ಹತ್ತಿರ ಭಿಕ್ಷುಕರು ಕಾಣಿಸಲಿಲ್ಲವಾದ್ದರಿಂದ ಆ ನಾಣ್ಯಗಳು ನನ್ನ ಖರ್ಚಿಗೆ ಹೊಂದಿಕೆ ಆದವು.

ಈ ಮಧ್ಯೆ ಒಂದು ದಿನ ಕೆಂಪೇಗೌಡ ರಸ್ತೆಯಲ್ಲಿ ನನ್ನಾಕೆಯೊಂದಿಗೆ ಹೋಗುತ್ತಿದ್ದಾಗ ಒಬ್ಬ ಭಿಕ್ಷುಕ ಕಾಣಿಸಿದ. ಮನಸ್ಸಿನಲ್ಲಿ ಹುದುಗಿದ್ದ ಕಾರ್ಲ್‌ಮಾರ್ಕ್ಸ್ ನೋಡು ನೋಡು ಭಿಕ್ಷುಕ ಇದ್ದಾನೆ. ಆತನ ಪಾಲಿಗೆ ಸೇರಬೇಕಾದ ಪುಡಿ ಕಾಸುಗಳನ್ನ ನೀನು ಆಗಲೇ ಖರ್ಚು ಮಾಡಿದ್ದೀ. ಈಗೇನು ಮಾಡ್ತೀಯೇ? ಬೂರ್ಜ್ವಾ ಅಂತ ಬೈದ ಹಾಗಾಯಿತು. ಜೇಬು ತಡಕಿದೆ. ಚಿಲ್ಲರೆ ಕಾಸು ಇರಲಿಲ್ಲ. ಪ್ಯಾಂಟಿನ ಹಿಂಬದಿ ಪ್ಯಾಕೆಟ್‌ನಲ್ಲಿದ್ದ ಗರಿ ಗರಿಯಾದ ಐದರ ನೋಟು ತೆಗೆದು ಭಿಕ್ಷುಕನಿಗೆ ಹಾಕಿದೆ. ಭಿಕ್ಷುಕ ರಸ್ತೆಯಲ್ಲೇ ಸಾಷ್ಟಾಂಗ ಮಾಡಿದ. ಈ ನಾಟಕ ನೋಡುತ್ತಿದ್ದ ನನ್ನಾಕೆ ‘ನಿಮಗೇನು ತಲೆಗಿಲೆ ಕೆಟ್ಟಿದೆಯೇ?’ ಅಂತ ರೇಗಿದಳು. ಭಿಕ್ಷುಕನಿಗೆ ಐದರ ನೋಟು ಅದೂ ಹೊಸಾ ಗರಿ ಗರಿ ನೋಟು ಹೆಂಡತಿ ಬಗೆಗೆ ಕನಿಕರ ಹುಟ್ಟಿತು. ಅವಳಿಗೆ ಕಾರ್ಲ್‌ಮಾರ್ಕ್ಸ್ ಹಾಗೂ ನನ್ನ ಮನಸ್ಸಿನ ನಡುವೆ ನಡೆದ ಚರ್ಚೆಯ ವಿವರ ತಿಳಿಸಿದೆ. ನಂತರ ತಿಳಿಸಬಾರದಿತ್ತು ಅಂತ ಅನಿಸಿತು. ಎರಡೇ ದಿವಸದಲ್ಲಿ ಇಡೀ ಅವಳ ಪರಿವಾರಕ್ಕೆ ಈ ಸಂಗತಿ ತಿಳಿದು ಹೋಗಿತ್ತು. ಯಾರಾದರೂ ಅವಳ ಕಡೆಯ ನೆಂಟರ ಮನೆಗೆ ಹೋದಾಗಲೋ ಅಥವಾ ಅವಳ ನೆಂಟರು ಸಿಕ್ಕಿದಾಗಲೋ ನನ್ನನ್ನು ಒಂದು

ರೀತಿಯ ಕುಹಕ ನೋಟದಿಂದ ನೋಡುವುದೂ, ತಮ್ಮ ತಮ್ಮಲ್ಲೇ ಪಿಸ ಪಿಸ ಮಾತನಾಡುವುದೂ ನಡೆಯಿತು. ಸ್ವಲ್ಪ ಸಲಿಗೆ ಇರುವವರಾದರೆ ''ಅಯ್ಯಾ ದಾನಾ ಚಿಂತಾಮಣಿ, ಧರ್ಮವೇ ತಾಯಿತಂದೆ ಐದರ ನೋಟೊಂದನ್ನು ಹಾಕೋ... '' ಅಂತ ರೇಗಿಸುವ ಮಟ್ಟಕ್ಕೂ ಹೋಯಿತು. ಇಂತಹದ್ದಕ್ಕೆ ಸೊಪ್ಪು ಹಾಕಿವವ ನಾನಲ್ಲ.

ವಾಕಿಂಗ್ ಪ್ರಾರಂಭಿಸಿದ ಒಂದೆರೆಡು ತಿಂಗಳ ನಂತರ ನನ್ನ ಫ್ಯಾಕ್ಟರಿಯ ಸಹೋದ್ಯೋಗಿಯೊಬ್ಬರು ನನ್ನ ರೀತಿಯಲ್ಲೇ ಫ್ಯಾಕ್ಟರಿಗೆ ನನ್ನ ತರಹವೇ ವಾಕಿಂಗ್ ಆರಂಭಿಸಿದ್ದವರು ಜತೆಗೆ ಸಿಕ್ಕಿದರು. ಇಬ್ಬರೂ ಕೆರೆದಾರಿಗೆ ಬಂದೆವು. ಮೊದಲು ಒಂದು ನಾಲ್ಕಾಣೆ ನಾಣ್ಯ ಕಾಣಿಸಿತು. ಅದನ್ನ ಹೆಕ್ಕಿ ಜೇಬಿಗೆ ಸೇರಿಸಿದೆ. ಅವರು ಮುಖ ಸಿಂಡರಿಸಿದರು. ನಾಣ್ಯ ನನಗೆ ಸಿಕ್ಕಿದೆ. ಅದಕ್ಕೇ ಅವರು ಮುಖ ಸಿಂಡರಿಸಿದ್ದಾರೆ ಅಂತ ಅರ್ಥೈಸಿದೆ. ಕೊಂಚ ದೂರ ಬಂದ ನಂತರ ಹತ್ತು ಪೈಸೆ ನಾಣ್ಯ ಎರಡು ಅಕ್ಕಪಕ್ಕದಲ್ಲೇ ಬಿದ್ದಿತ್ತು. ಅದನ್ನೂ ಜೇಬಿಗೆ ಸೇರಿಸಿದೆ. ಅವರ ಮುಖದಲ್ಲಿ ಅಸಹ್ಯ ಅಸಹನೆ ಎದ್ದು ತೋರಿತು. ಬೇಜಾರಾಗಿದೆ ನಾಣ್ಯ ಅವರಿಗೆ ದಕ್ಕಿಲ್ಲದ್ದರಿಂದ ಅಂದುಕೊಂಡೆ. 'ನೋಡಿ ಇವರೇ ಮುಂದೆ ಸಿಗುತ್ತಲ್ಲಾ ನಾಣ್ಯ ಅದನ್ನ ನೀವೇ ತಗೊಳ್ಳಿ' ಅಂದೆ. ಅವರು ಸುಮ್ಮನೇ ನನ್ನ ಮುಖ ನೋಡಿ ಗಂಟಲಿನಲ್ಲಿ 'ಖ್ಥೆ' ಅಂತ ಶಬ್ದ ಮಾಡಿದರು. ಕೊಂಚ ಮುಂದೆ ಬಂದರೆ ಒಂದು ಐವತ್ತು ಪೈಸೆ ನಾಣ್ಯ ಬಿದ್ದಿದೆ. ಅವರೂ ಅದನ್ನ ನೋಡಿದರು. ಹೆಕ್ಕಿ ತಗೆಯದೇ ಹಾಗೇ ಮುಂದೆ ನಡೆದರು. ಪಾಪ ಮೈ ಬಗ್ಗಿಸಿ ತೆಗೆಯಲು ಅವರಿಗೆ ಆಗದೇನೋ ಅನಿಸಿ ನಾನೇ ಅದನ್ನು ಹೆಕ್ಕಿದೆ. ಅವರ ಮುಖ ಒಂದು ಕೇಜಿ ಹರಳೆಣ್ಣೆ ಕುಡಿದ ಹಾಗೆ ಆಗಿತ್ತು. ನಾಣ್ಯ ಸಿಕ್ಕದ್ದರಿಂದ, ಸಿಕ್ಕಿದ ನಾಣ್ಯಗಳೆಲ್ಲವೂ ನನ್ನ ಪಾಲೇ ಆಗುತ್ತಿರುವುದರಿಂದ ಹೀಗೆ ಆಗುತ್ತಿದೆ ಅವರ ಮುಸುಡಿ ಎಂದು ಅರ್ಥ ಆಯಿತು.

ನೋಡಿ ಇವರೇ ಬೇಜಾರು ಮಾಡಿಕೋಬೇಡಿ. ಫ್ಯಾಕ್ಟರೀಗೆ ಸೇರುವವರೆಗೂ ಸಿಗೋ ಕಾಯಿನ್ನುಗಳನ್ನು ನಾನೇ ತಗೋತೀನಿ. ನಂತರ ಫಿಫ್ಟಿ ಫಿಫ್ಟಿ ಷೇರ್ ಮಾಡೋಣ ಅಂದೆ. ಈ ಸಲ ಜೋರಾಗಿ 'ಖ್ಥೆ' ಅಂದರು ಅವರು. 'ನಿನ್ನೆ ರಾತ್ರಿ ಈ ರಸ್ತೇಲಿ ಒಂದು ಹೆಣ ಹೋಯಿತು. ನಿಮಗೆ ಸಿಕ್ಕಿರೋ ಕಾಯಿನ್ನು ಹೆಣದ ಮೇಲೆ ಎಸೆದವು ಅಂದರು. ಒಂದು ಕ್ಷಣ ತಬ್ಬಿಬ್ಬಾದೆ. ಜೇಬಿಗೆ ಸೇರಿಸಿರುವ ಕಾಯಿನ್ನುಗಳನ್ನು ಎಸೆಯೋಣವೇ ಅನಿಸಿತು. ಆದರೂ ಸಂಭಾಳಿಸಿಕೊಂಡೆ. ''ಬಿಡಿ ಪರವಾಗಿಲ್ಲ ಇದು ಬಡವರಿಗೆ ಮತ್ತು ಭಿಕ್ಷುಕರಿಗೆ ನೀಡಬೇಕಾದ್ದು..'' ಅಂತ ಕಾರ್ಲ್‌ಮಾರ್ಕ್ಸ್ ಮತ್ತು ನನ್ನ ಮನಸ್ಸಿನ ನಡುವೆ ಜರುಗಿದ ಸಂಭಾಷಣೆಯ

ವಿವರ ನೀಡಿದೆ. ಆತ ನಕ್ಕರು. 'ಏನೇ ಹೇಳಿ ಸಾರ್ ಹೆಣದ ಮೇಲೆ ಎಸೆದ ದುಡ್ಡು ಛೈಛೈ...'' ಅಂತ ಅಂದು ''ನನಗೆ ಬೇಡ'' ಅಂದರು.

ಈ ವೇಳೆಗೆ ಕೆರೆರಸ್ತೆ ದಾಟಿದ್ದೆವು. ಕಾರ್ಖಾನೆಯ ಕ್ವಾರ್ಟರ್ಸ್‌ನ ಮಹಡಿ ಮನೆಗಳ ರಸ್ತೆಗೆ ತಿರುಗಿದ್ದೆವು. ಎದುರಿಗೆ ಆರೇಳು ಅಡಿ ದೂರದಲ್ಲಿ ಹೊಚ್ಚ ಹೊಸತಾದ ನಾಲ್ಕು ಬಾರಿ ಮಡಿಸಿದ ನೂರರ ನೋಟು ನನ್ನ ಕಣ್ಣಿಗೆ ಬೀಳಬೇಕೇ? ಸಹೋದ್ಯೋಗಿ ಗಮನ ಅತ್ತ ಹರಿಯುವ ಮೊದಲು ಅನ್ನು ಗುಟಕ್ ಅಂತ ಗೆಟಕಿ ಜೇಬಿಗೆ ಸೇರಿಸಿದೆ. ''ಹೆಣದ ಮೇಲೆ ನೂರರ ನೋಟು ಅದೂ ಹೊಸಾದು ಎಸೀತಾರಾ ಸಾರ್?' ಅಂತ ಕೇಳಿದೆ. ಆತ ಪೆಚ್ಚು ಪೆಚ್ಚಾಗಿ ಮತ್ತೆರೆಡು ಸಲ ಬೆಬೆ ಮಾಡಿದರು. ನಂತರ ಒಂದು ಒಂದೂವರೆ ತಿಂಗಳು ಈ ಮಹಡಿ ಮನೆಗಳ ರಸ್ತೆಯಲ್ಲಿ ನಾನು ಸುಳಿದಿದ್ದರೆ ಕೇಳಿ ಅವತ್ತು ನಿನಗೆ ಸಿಕ್ಕಿದ ನೂರು ರೂಪಾಯಿ ನನ್ನದು ತಾರಯ್ಯಾ ಅಂತ ಯಾರಾದರೂ ಹಿಡಿದುಕೊಂಡರೆ ಅಂಬೋ ದಿಗಿಲು ನನಗೆ. ನೂರರ ನೋಟು ಸಿಕ್ಕಿದಾಗ ಕಾರ್ಲ್ ಮಾರ್ಕ್ಸ್ ಮೂಕ ಆಗಿಬಿಟ್ಟಿದ್ದ ಮತ್ತು ಅಂದಿನಿಂದ ಈ ದಿನದವರೆಗೆ ಅವನು ನನ್ನೆದುರು ಬಾಯಿಬಿಟ್ಟಿದ್ದರೆ ಕೇಳಿ! ಕೆರೆ ರಸ್ತೇಲಿ ಈಗಲೂ ನನಗೆ ಚಿಲ್ಲರೆ ಕಾಸು ಸಿಗುತ್ತೆ ಮತ್ತು ಎನಗಿಂತ ಬಡವರಿಲ್ಲದಿರುವುದರಿಂದ ಅದು ನನ್ನ ಜೇಬೇ ಸೇರುತ್ತೆ! ಆಗಾಗ ಬಗ್ಗಿ ಕಾಸು ಹೆಕ್ಕುವುದರಿಂದ ಕೊಂಚ ವ್ಯಾಯಾಮ ಸಹ ಆಗುತ್ತದೆ. ಅದರಿಂದಲೇ ಎಲ್ಲರೂ ನಡೆಯಿರಿ ಎಂಬ ಸ್ಲೋಗನ್ ನೀಡುವ ಯೋಜನೆಯಲ್ಲಿದ್ದೇವೆ. (ಆಕಾಶವಾಣಿ ಕೃಪೆ:)



# ಪ್ರಶಸ್ತಿ ಪ್ರಸಂಗ

– ಶಂಸ

ಬಂದಾಗ ಪತ್ರ ಅಮೆರಿಕದ 'ಬೀಐ' ಯಿಂದ
ದಂಗಾಗಿಬಿಟ್ಟ ಪಂಡಿತ ಸಾಹಿತಿ
'ತುರ್ತು ಕಳುಹಿಸಿ ಮೂರು ಪ್ರತಿಗಳಲಿ ನಿಮ್ಮ ಸಂ
ಪೂರ್ಣ ಬಯೊಡಾಟ ಫೋಟೋ ಮಾಹಿತಿ
ನಮ್ಮ ಡೈರೆಕ್ಟರಿಯ ಮುಖ್ಯ ಸಂಪಾದಕರು
ನಿಮ್ಮ ಸಾಧನೆ, ಸಿದ್ಧಿ ಗುರುತಿಸಿದ್ದಾರೆ.
ಆಯ್ಕೆಯಾಗಿದ್ದೀರಿ - ಸುಪ್ರತಿಷ್ಠಿತ ವಿಶ್ವ
ಸಾಹಿತ್ಯ ಶ್ರೀ ಪ್ರಶಸ್ತಿಗೆ'... ವಗೈರೆ

ಸೂಚನೆ: ಕೂಡಲೆ ತುಂಬಿ ನಮೂನೆ;
ಫ್ಯಾಕ್ಸ್ ಮೂಲಕವೇ ಮಾಡಿ ರವಾನೆ

ಕಣ್ಣು ಕತ್ತಲೆ ಬಂದರೂ ಚೇತರಿಸಿಕೊಂಡು
ಯೋಚಿಸಿದ: ಕನ್ನಡದ ಹೂ ಹಣ್ಣು ಶಾಲು
ಬಿನ್ನವತ್ತಳೆ ಗಾನಸ್ತೋತ್ರ ಬಘೆಗಳಿಗಿಂತ
ಭಿನ್ನವಿರಬಹುದಾದ ಸನ್ಮಾನ ಮೇಲು
ಹೋಗಬೇಕಾಗಬಹುದೇ ನಾನು ಅಮೆರಿಕೆಗೆ
ಹೇಗೆ ಪಡೆದರು ಇವರು ನನ್ನ ವಿಳಾಸ?
ಎತ್ತಣ ಮಾಮರ ಎತ್ತಣ ಕೋಗಿಲೆ
ಇದ್ದೀತೇ ಏನಾದರೂ ಮೋಸ?

ನನ್ನಲ್ಲೆಲ್ಲಿದೆ ಪಾಸ್‌ಪೋರ್ಟ್ ವೀಸಾ?
ಪಡೆಯುವುದಷ್ಟು ಸಲೀಸಾ?

ಧಾವಿಸಿದ ಸ್ಟುಡಿಯೋಗೆ 'ನಿನ್ನ ಕೈವಾಡ ಕ್ಯಾ -
ಮರವಾಡಗಳ ಬಳಸಿ ನನ್ನ ಚಿತ್ರ
ಚೆನ್ನಾಗಿ ಬರುವಂತೆ ತೆಗೆ', 'ಕೆನ್ನೆಯಲಿ ಕೂದ

ಲಲ್ಲಲ್ಲಿದೇನ್ ಷೇಪೋ; ತುಂಬಾ ವಿಚಿತ್ರ'
ಎಂದವನೆ ಕ್ಷೌರಿಕನ ಹಾಗೆ ಫೋಟೋಗ್ರಾಫರ್
ಪಂಡಿತನ ಕತ್ತನ್ನು ಅತ್ತ ಇತ್ತ
ತಿರುಗಿಸಿದ ನಾಲ್ಕೈದು ಬಾರಿ, 'ಸಾಕಪ್ಪ ಈ
ಹಿಂಸೆ; ಅಯ್ಯೋ ಎಂದು ಪಂಡಿತನು ಅತ್ತ

ಮನೆಗೆ ಮರಳಿದ ಪಂಡಿತನು
ಫಾರ್ಮು ತೆಗೆದು
ಹೆಸರು, ಜನ್ಮದಿನಾಂಕ ಇತ್ಯಾದಿ ಪೂರ್ತಿ
ವಿವರಗಳ ತುಂಬಿ ಅದ ಮಾಡಿದನು ಭರ್ತಿ

ಆಮೇಲೆ, ಡೀಟೀಪಿ, ಟೈಪಿಂಗ್, ಜೆರಾಕ್ಸು
''ಇತ್ಯಾದಿ... ಐದೈದು ಪ್ರತಿ ಹೆಚ್ಚೆ ಇರಲಿ
ಪಂಪ, ನೋಬೆಲ್, ಅಕಾಡೆಮಿ, ಜ್ಞಾನಪೀಠಗಳು
ಬರುವುದಾದರೆ ಬರಲಿ, ಕೀರ್ತಿಯನು ತರಲಿ

ತಡವಾಗದಿರಲೆಂದು ಫ್ಯಾಕ್ಸ್‌ದ್ವಾರಾ ಕಳುಹಿಸಿದ
ಈ ವೆಚ್ಚಗಳಿಗೆ ನಾ ಭಯಪಡುವುದೇನು?
ಕಾಯುತ್ತ ಕುಳಿತ ಚಾತಕದಂತೆ. ಒಂದು ದಿನ
ಬಂತು 'ಬೀಐ'ಯಿಂದ ತುರ್ತು ಫೋನು

''ಕಳುಹಿಸಿರಿ ಕೂಡಲೇ ಐನೂರು ಡಾಲರ್''
ಕುಸಿದು ಬಿದ್ದನು ನಮ್ಮ ಶ್ರೇಷ್ಠ ಸ್ಕಾಲರ್!

**ಚಪಲ**

ಹೆಂಡತಿಯೊಬ್ಬಳು ಮನೆಯೊಳಗಿರದಿರೆ
ತಿಂಡಿಯದೇ ಬಲು ತ್ರಾಸ
ಪಕ್ಕದ ಮನೆಯಾ ಸುಂದರಿ ಕಂಡರೆ
ಅಷ್ಟೇ ತುಸು ಗೋಗ್ರಾಸ

– ಶೀನೂ

# ಸತ್ತವರು ಎದ್ದು ಬಂದಾಗ

- ಎನ್. ಪ್ರಭಾಕರ್

ಸತ್ತೇ ಇಲ್ಲದವನು ಎದ್ದು ಬಂದಾಗ ಏನೆಲ್ಲಾ ಅನಾಹುತ ನಡೆಯಿತೆಂದು ಹಾಸ್ಯಬ್ರಹ್ಮ ಬೀchi ಯವರು ಓದುಗರಿಗೆ ಸೃಜನಶೀಲ ಹಾಸ್ಯದ ಶಾಕ್ ಕೊಡುತ್ತಾರೆ. ಅವರ ವ್ಯಂಗ್ಯದ ಮೊನಚಿಗೆ ತಲೆಬಾಗಿ, ಸತ್ತಿಲ್ಲದ ನಾನು ಸತ್ತು ಸ್ವರ್ಗಸ್ಥರಾಗಿರುವ ಕೆಲ ಸಾಹಿತಿಗಳ ಬಳಿಗೆ ಸಾರಿ ದರ್ಶನ ಪಡೆದು, ಮೃದು ನುಡಿಗಳಾಡಿ, ಅಂತಿಮವಾಗಿ ಬೀchi ಯವರನ್ನು ಕಂಡು ಅವರ ಹಾಸ್ಯದ ಪಾವಿತ್ರತೆಯನ್ನು ಕಾಪಾಡಿಕೊಳ್ಳಲು ಬಯಸುತ್ತೇನೆ. ಅದು ಹೇಗೆಂದರೆ, ಅಲ್ಲಲ್ಲ... ಹೇಗೆ ಅದು ಅಂದರೆ...

ಮುಂಬೆಳಗಿನ ಬಯಲ ಬಾನಿನಲ್ಲಿ ಶಿಶು ಸೂರ್ಯ ಅರೆತೆರೆದ ಕೆಂಪಡರತೊಡಗಿದ್ದ ನೇತ್ರದ್ವಯಗಳಿಂದ ಇಡೀ ಭೌಗೋಳಿಕ ವ್ಯಾಪ್ತಿಯನ್ನು ಒಮ್ಮೆಗೇ ಸುಡಲು ಸಾಧ್ಯವೇ ಎಂದು ಚಿಂತಿಸುತ್ತಾ, ತರ್ಕಿಸುತ್ತಾ ಕ್ಷಣಕ್ಷಣಕ್ಕೂ ಮೇಲೇರಿದಂತೆಲ್ಲಾ ಆತನ ಶಾಖ, ಕಾವು, ತೀಕ್ಷ್ಣತೆಗಳು ಇಮ್ಮಡಿ, ಮುಮ್ಮಡಿ, ನೂರ್ಮಡಿಯಾಗುತ್ತಾ ಪ್ರಚಂಡ ಕಿರಣಗಳಿಂದ ಭೂಮಂಡಲವನ್ನೇ ನುಂಗಲು ಹವಣಿಸುವಂತಹ ಕಡು ಬೇಸಿಗೆಯ ಬಿಸಲಿನ ಮಧ್ಯಾಹ್ನದ ಸಮಯದಲ್ಲಿ ನಾನು ಬಲವಂತವಾಗಿ ಕಾಲ್ಗಳನ್ನು ಎತ್ತಿ ಮುಂದಿಡುತ್ತಾ ನಡೆಯುತ್ತಿದ್ದೇನೆ. ಕಾಡು, ಊರು ಸವೆಸಿ ಕೋಟೆಯ ಬಳಿ ಬರುತ್ತೇನೆ. ಚಾರಿತ್ರಿಕ ವೈಭವದ ಹಾಳು ಕೋಟೆ, ಕೊತ್ತಲು, ಗುಡ್ಡ ಬೆಟ್ಟಗಳ ನಡುವೆ ಗಂಭೀರವದನರಾಗಿ ತ.ರಾ.ಸು. ಸಾಹಿತ್ಯ ಸೃಷ್ಟಿಸುತ್ತಿದ್ದಾರೆ. ಅರರೆ! ಅವರ ಕೈಯಲ್ಲಿ ಲೇಖನಿಯಿಲ್ಲ. ಬದಲಾಗಿ ರಕ್ತಸಿಕ್ತ ಕತ್ತಿಯನ್ನು ಹಿಡಿದು ಅಳಿದ ವೀರನಾಯಕರ ಬಗ್ಗೆ ಬರೆಯುತ್ತಿದ್ದಾರೆ. ಕಂಗಳು ಕೆಂಪಾಗಿ ನಾಯಕರುಗಳ ನೆನಪಿನ ರಕ್ತದೋಕುಳಿಯಾಡುವಂತೆ ಕಾಣುತ್ತಿದೆ. ಓಬವ್ವ, ಮದಕರಿನಾಯ್ಕ, ವೆಂಕಟಸುಬ್ಬಯ್ಯ ಯಾರ‍್ಯಾರು ಅವರ ಸ್ಮೃತಿಪಟಲದಲ್ಲಿ, ಚಕ್ರತೀರ್ಥದಲ್ಲಿ ರಾರಾಜಿಸುತ್ತಿದ್ದಾರೆ ಅಂತ ಅವರಿಗೇ ಗೊತ್ತಾಗಬೇಕು. ಇಂಥ ಗಂಭೀರ ಸೃಷ್ಟಿಯ ಸಮಯದಲ್ಲಿ ಅವರ ಕಲಾರಸ ಭಂಗಮಾಡುವುದು ಅನುಚಿತವೆಂದು ಭಾವಿಸಿ ಅವರಿಗೆ ದೂರದಿಂದಲೇ ನಮಿಸಿ ಮುಂದೆ ಸಾಗಿ ಘಟ್ಟ ಹತ್ತಿ ಕೆಳಕ್ಕಿಳಿಯುತ್ತೇನೆ.

ಮುಂದೆ ಹಸಿರ ಕಾಡು, ಕಿರು ಜಲಪಾತಗಳು, ಕಳಂಜಿಮಲೆ ದಾಟಿ ಹರಿದಾರಿ ಪಯಣಿಸಿದ ಮೇಲೆ ಶಿವರಾಮ ಕಾರಂತರು ವಾಸಿಸುತ್ತಿದ್ದ ತೋಟದ ಮನೆಗೆ ಕಾಲಿಡುತ್ತೇನೆ. ತಮ್ಮ ತೋಟಕ್ಕೆ ಕಾಡಹಂದಿ ಕಾಟ ತಪ್ಪಿಸಲು ಕಾರಂತರು ವಿದ್ಯುತ್ ಬೇಲಿ ಹಾಕಿಸಿದ್ದರು. ಕಚ್ಚೆಪಂಚೆ, ಬನಿಯನ್ ಧರಿಸಿ ಅವರು ಬೇಲಿಯನ್ನು ಸರಿಪಡಿಸುತ್ತಿದ್ದರು. ಮಕ್ಕಳು ತೋಟದೊಳಗೆ ಮೈಮರೆತು ಆಡುತ್ತಿದ್ದರು. ಆಗುಂತಕನಾದ ನನ್ನನ್ನು ಕಂಡು, 'ಬರಬೇಕು ಮಾರಾಯ್ರೆ, ಎತ್ತಲಿಂದ ಪಯಣ, ಯಾವೂರಾಯ್ತು ತಮ್ಮದು?'' ಎಂದು ಆದರಿಸಿ ತೋಟದ ಮನೆಯವರೆಗೆ ಕರೆದುಕೊಂಡು ಹೋಗಿ ಚಾವಡಿಯಲ್ಲಿ ಕುಳ್ಳಿರಿಸಿದರು. ''ಬಯಲು ಸೀಮೆಯವರೊ? ಅಲೆದಾಡೋ ಅಭ್ಯಾಸವಿಲ್ಲದವರು ಅನಿಸುತ್ತೆ, ನಿಮ್ಮ ಬೆವರನ್ನು ನೋಡಿದರೆ'' ಎಂದು ಲೇವಡಿ ಮಾಡಿ ತಾವೇ ಖುದ್ದಾಗಿ ಬೆಲ್ಲ ನೀರು ತಂದು ಉಪಚರಿಸಿದರು. ನಂತರ ''ದಾರಿಯಲ್ಲಿ ಕೆಸರಿನ ಸ್ನಾನವಾಗಿದೆ, ಈಗ ಬಿಸಿನೀರಿನ ಸ್ನಾನಮಾಡಿ'' ಎಂದರು. ಸುಡು ನೀರಲ್ಲಿ ಮಿಂದದ್ದಾಯ್ತು. ಗಡದ್ದಾಗಿ ಊಟವಾಯ್ತು. ಕಾರಂತರ ಊಟದ ರಸಿಕತೆಯಂತೂ ಯಾರಾದರೂ ಬೆರಗಾಗುವಂತಾದ್ದು. ಜೊತೆಯಾಗಿ ಎಲೆ ಮೆದ್ದವು. ಚಾಪೆ ಬಿಡಿಸಿ ಒಂದು ತಾಸು ನಿದ್ದೆ ಮಾಡಿ ಅಂದರು, ಅದು ನೆಪಮಾತ್ರಕ್ಕೆ. ಸಾಹಿತ್ಯದ ಬಗ್ಗೆ, ಸಮಾಜದ ಬಗ್ಗೆ, ಪರಿಸರ, ರಾಜಕಾರಣ - ಹೀಗೆ ಹರಟೆ ಹೊಡೆದದ್ದೇ ಆಯ್ತು.

''ಇಂದಿನ ಹಾಸ್ಯದ ಬಗ್ಗೆ ತಾವು ಏನನ್ನುತ್ತೀರ?'' ಎಂದೆ. ಕಾರಂತರು ಖಾರದಂತಾದರು. ''ಏನು ಬರೆದಾರು ಹಾಸ್ಯ ಸಾಹಿತಿಗಳು ಅದು ಹಾಸ್ಯ ಅಂತ ತಿಳಿಸಿ ಬರೆಯುತ್ತಿರುವುದರಿಂದ ಹಾಸ್ಯ ಸಾಹಿತ್ಯವೆಂದು ತಿಳಿದುಕೊಳ್ಳಬೇಕು. ಸಾಹಿತ್ಯಕ್ಕಾಗಲಿ, ಸಮಾಜಕ್ಕಾಗಲಿ ತಮ್ಮ ಪಾಲಿನ ಋಣ ಸಂದಾಯವಾಗಬೇಕೆಂಬ ಲೆಖ್ಖಾಚಾರ ಬೇಡವೆ, ಬರಹಗಾರರಿಗೆ?''

ಕೊನೆಗೆ ಅವರಿಂದ ಬೀಳ್ಕೊಂಡೆ. ಹೊರಡುವಾಗ ಕೈಮುಗಿದು ''ಮತ್ತೊಮ್ಮೆ ಭೇಟಿಯಾಗ್ತೇನೆ'' ಎಂದು ಕೈಮುಗಿದೆ. ''ಒಮ್ಮೆ ಮಾತ್ರವೋ?'' ಎಂದು ಪುನಃ ಚೇಷ್ಟೆಯ ಮಾತನಾಡಿದರು.

ಮುಂದೆ ನಾನು ಅನ್ನಪೂರ್ಣದ ಅ.ನ.ಕೃ. ಮನೆಗೆ ತೆರಳಿದೆ. ಬರಹವನ್ನೇ ಬದುಕನ್ನಾಗಿರಿಸಿಕೊಂಡಿದ್ದ ಅವರಿಗೆ ನನ್ನನ್ನು ನಾನು ಪರಿಚಯಿಸಿಕೊಂಡೆ. ''ಬಹಳ ಸಂತೋಷ. ಒಂದು ಕಾದಂಬರಿ ಪ್ರಾರಂಭಿಸಿದ್ದೇನೆ, ಶ್ರೋತ್ರೀಯ ಬ್ರಾಹ್ಮಣನ ಅಹರ್ನಿಶಿ ಕಾಲಕ್ಷೇಪದ ಬಗ್ಗೆ. ಅರ್ಧಘಂಟೆಯಲ್ಲಿ ಮುಗಿಸಿ

ಬಿಡುತ್ತೇನೆ. ದಯಮಾಡಿ ಅಲ್ಲಿಯವರೆಗೆ ಪ್ರಾತಃ ಫಲಹಾರ ಮುಗಿಸಿ ಬಾ'' ಎಂದು ಬೆನ್ನು ತಟ್ಟಿ ಬರವಣಿಗೆಯಲ್ಲಿ ಮಗ್ನರಾದರು. ಶ್ರೀಮತಿ ಅ.ನ.ಕೃ. ಬೆಳ್ಳಿ ತಟ್ಟೆಯಲ್ಲಿ ಉಪ್ಪಿಟ್ಟು, ಕೇಸರಿಬಾತ್, ಬೋಂಡ, ಕೊಟ್ಟು ಮನೆಯ ಹೆಸರಿಗೆ ನ್ಯಾಯ ದೊರಕಿಸಿಕೊಟ್ಟರು. ಪುನಃ ಅ.ನ.ಕೃ. ನೋಡಲು ಹೋದಾಗ ಅವರು ಇನ್ನೊಂದು ಕಾದಂಬರಿ ಬರೆಯಲು ಪ್ರಾರಂಭಿಸಿದ್ದರು. ಅದು ಸಾಧ್ವಿಯೋರ್ವಳ ಕರಾಳ ಬದುಕನ್ನು ಕುರಿತದ್ದಾಗಿತ್ತು. ವಿಧಿಯಿಲ್ಲದೇ ಅ.ನ.ಕೃ. ಅವರನ್ನು ಮಾತಿಗೆಳೆದೆ.

''ಇಂದಿನ ಸಾಹಿತ್ಯ ಸಂದರ್ಭದಲ್ಲಿ ಹಾಸ್ಯದ ಸ್ಥಾನಮಾನ ಹೇಗಿದೆ?''

''ಇಂದಿನ ಸಾಹಿತ್ಯ ಸಂದರ್ಭ ಅನ್ನುವ ಪ್ರಮೇಯವೇ ಇಲ್ಲ. ಸಾಹಿತ್ಯ ಸರ್ವಕಾಲಿಕ. ಹಾಸ್ಯ, ಸಾಹಿತ್ಯ ಪ್ರಾಕಾರಗಳಲ್ಲಿ ಒಂದು. ಅದಕ್ಕೆ ಅಗ್ರಸ್ಥಾನ ಇನ್ನೂ ಸಿಗಬೇಕಾಗಿದೆ. ಹಾಸ್ಯ ಸಾಹಿತ್ಯದ ಹಿಂದೆ ಸಾಮಾಜಿಕ, ಸಾಂಸ್ಕೃತಿಕ, ನೈತಿಕ ಮೌಲ್ಯಗಳ ನಿರಂತರ ಪ್ರಜ್ಞೆಯಿರಬೇಕು. ಬೀchi ಡಾ॥ ಶಿವರಾಂ, ಕಸ್ತೂರಿ, ನಾಡಿಗೇರರು ಇವರೆಲ್ಲಾ ಹಾಸ್ಯ ಸಾಹಿತ್ಯಕ್ಕೊಂದು ಸ್ಪಷ್ಟ, ಅಚಲ, ಪ್ರಖರವಾದ ದಿಕ್ಕನ್ನು ಸೂಚಿಸಿದ್ದಾರೆ.''

''ನವ್ಯ ಹಾಸ್ಯ ಸಾಹಿತಿಗಳಿಗೆ ತಮ್ಮ ಹಿತವಚನ?''

''ಅಣ್ಣನ ವಚನ, ಅಕ್ಕನ ವಚನಗಳಂತೆ ಅವ್ಯಾಹತವಾಗಿ ಹಾಸ್ಯ ಲೇಖನಗಳನ್ನು ಬರೆಯಬೇಕು. ಬೆಳಗ್ಗೆ ಒಂದು, ಮಧ್ಯಾಹ್ನ ಮತ್ತೊಂದು, ಸಂಜೆ ಮಗದೊಂದು ಹೀಗೆ ಬರೆಯುತ್ತಲೇ ಇರಬೇಕು. ಕನಿಷ್ಠ ಒಬ್ಬ ಹಾಸ್ಯ ಸಾಹಿತಿಯಿಂದ ನೂರು ಪುಸ್ತಕವಾದರೂ ಪ್ರಕಟವಾಗಬೇಕು'' ಎಂದು ಶುಭ ಹಾರೈಸಿ ಗೆಳೆಯರನ್ನು ಅರಸುತ್ತಾ ಅ.ನ.ಕೃ. ಬಾರ್ ಕಡೆ ಹೆಜ್ಜೆ ಹಾಕಿದರು.

ಮುಂದಿನ ಬೇಟಿ ನಾಡಿಗೇರ ಕೃಷ್ಣರಾಯರ ಮನೆಗೆ. ಅದೇ ಬಾಡಿಗೆ ಮನೆ. ನನ್ನನ್ನು ಪರಿಚಯಿಸಿಕೊಂಡೆ. ''ದೊಡ್ಡ ದೊಡ್ಡ ಸಾಹಿತಿಗಳು ಸಿಗದೆ ಕೊನೆಗೆ ನನ್ನ ಬಳಿಗೆ ಬಂದಿರಾ?'' ಎಂದು ನಕ್ಕರು. 'ಲೇ ಕಾಫಿ ತಂದುಕೊಡೆ, ಇವರಿಗೆ' ಎಂದರು. ಪುನಃ ಅವರೆ, ''ಹಾಲು ಒಡೆದು ಹೋಗಿದೆಯಾ, ಬಿಡು ಪರವಾಗಿಲ್ಲ. ಹೇಗೂ ಇಬ್ಬರೂ ಅ.ನ.ಕೃ. ಮನೆಗೆ ಹೋಗ್ತೇವೆ. ಅಲ್ಲೇ ಕಾಫಿ ಆಗುತ್ತಲ್ಲ'' ಎಂದರು. ''ಹಾಸ್ಯದ ವಸ್ತು ನಿಮಗೆ ಹೇಗೆ ಸಿಗುತ್ತಿತ್ತು?'' ಎಂದೆ. ''ಬಡತನ, ಮಕ್ಕಳು, ಸಂಸಾರ, ಸಾಲದೆ? ಮುಂದಿನ ಶತಮಾನಕ್ಕು ಅದೇ ವಸ್ತು ಗೊತ್ತಾ?'' ಅಂದರು.

''ತಮಗೆ ಪ್ರೇರಣೆ?''

''ಕನ್ನಡದವರು ಕನ್ನಡ ಮಾತನಾಡುತ್ತಾರಲ್ಲ, ಅದೇ ಪ್ರೇರಣೆ?''

''ಇಂದಿನ ಹಾಸ್ಯ ಸಾಹಿತಿಗಳಿಗೆ ತಮ್ಮ ಹಿತನುಡಿ?''

''ಹಿತ ಮಿತ ನುಡಿ ಒಂದೆ. ಹೆಂಡತಿಯರನ್ನು, ಕ್ಷಮಿಸಿ, ಹೆಂಡತಿಯನ್ನು ಹಾಸ್ಯದ ವಸ್ತುವನ್ನಾಗಿ ಉಪಯೋಗಿಸಿಕೊಳ್ಳಬೇಡಿ. ಅಕಸ್ಮಾತ್ ಉಪಯೋಗಿಸಿಕೊಂಡರೆ ಅವರವರ ಹೆಂಡತಿಯನ್ನು ಬಳಸಿಕೊಳ್ಳಿ ಪರವಾಗಿಲ್ಲ, ನನ್ನ ಹೆಂಡತಿಯನ್ನು ಮಾತ್ರ ಸಾಹಿತ್ಯಕ್ಕೆ ಎಳೆಯಬೇಡಿ. ಇಷ್ಟು ಸಾಕು! ಶ್ರೀರಾಂಪುರದಲ್ಲಿ ಕನ್ನಡ ಚಳುವಳಿ ಭಾಷಣವಿದೆ. ನಾನೇ ಕಷ್ಟಪಟ್ಟು, ಗೋಗರೆದುಕೊಂಡು ಭಾಷಣ ಮಾಡಲು ವ್ಯವಸ್ಥೆ ಮಾಡಿಕೊಂಡಿದ್ದೇನೆ. ರಾಮಮೂರ್ತಿ ಅಧ್ಯಕ್ಷತೆ. ಪಾಂಪ್ಲೆಟ್‌ನಲ್ಲಿ ಒಂದು ಸೂಚನೆ ಕೊಟ್ಟಿದ್ದೇನೆ. ಸಭೆಗೆ ಯಾರೂ ಟಮೊಟೊ, ಮೊಟ್ಟೆ ತರಬಾರದು. ಹೊಸ ಜೊತೆ ಚಪ್ಪಲಿಗೆ ಅಭ್ಯಂತರವಿಲ್ಲ ಅಂತ'' ಎಂದು ಜುಬ್ಬಾ ತೊಟ್ಟು ನಾಡಿಗೇರ ಕೃಷ್ಣರಾಯರು ಹೆಜ್ಜೆ ಹಾಕಿದರು.

ಕೊನೆಗೆ ಬೀchi ಯವರನ್ನು ಭೇಟಿ ಮಾಡಿದ್ದು ಸಂಜೆಯ ಸಮಯದಲ್ಲಿ. ಮೇಜಿನ ಮೇಲೆ ಅರೆ ಮುಗಿದಿದ್ದ ಮೂರು-ನಾಲ್ಕು ಬಾಟಲುಗಳು. ಸಿಗರೇಟಿನ ಹೊಗೆ ಸುತ್ತೆಲ್ಲಾ ತಾಂಡವವಾಡುತ್ತಿದೆ. ತೀಕ್ಷ್ಣ ವ್ಯಂಗ್ಯದ, ಸತ್ಯನಿಷ್ಠೂರಿ, ನಗುಲೇಪನದ ನೋವಿನ ಬೀchi ನನಗೆ ಡ್ರಿಂಕ್ಸ್ offer ಮಾಡಿದರು.

''ಅಭ್ಯಾಸವಿಲ್ಲ ಸಾರ್''

''ಅದೆಂತಾ ಸಾಹಿತಿರೀ ನೀವು? ಹೋಗಲಿ ಸಿಗರೇಟ್ please''

''Thanks ಸರ್''

''ನೀವು ಕಿರಿಯ ಸಾಹಿತಿಯೂ ಅಲ್ಲ ಕಿರಿಕಿರಿ ಸಾಹಿತಿ ಇರ್ಬೇಕು''

''ಹ್ಹಿ...ಹ್ಹಿ...''

''ಡ್ರಿಂಕ್ಸ್, ಸಿಗರೇಟ್, ವುಡ್‌ಹೌಸ್ ಪುಸ್ತಕ, ಅ.ನ.ಕೃ. ಸಾಹಿತ್ಯ ಇವೆಲ್ಲಾ ನಿಮ್ಮಂತ ಯುವ ಲೇಖಕರಿಗೆ ಸ್ಫೂರ್ತಿಯಾಗಬೇಕು. ಅದಿರಲಿ. ನಿಮಗೆ ಯಾವಗ್ಲಾದರೂ ಹೊಟ್ಟೆನೋವು ಬರ್‍ತಿರುತ್ತಾ?''

''ಅಪರೂಪಕ್ಕೆ... ಯಾಕೆ ಸಾರ್?''

''ಮುಂದೆ ಹೊಟ್ಟೆನೋವು ಬಂದರೆ ಸ್ವಲ್ಪ ಡ್ರಿಂಕ್ಸ್ ತಗೊಳ್ಳಿ, ಅದು ಮುಂದೆ

ನೋವು ಬರದ ಹಾಗೆ ಕಾಪಾಡುತ್ತೆ. ಪ್ರಿವೆನ್ಷನ್ ಆಗಿ ತೆಗೆದುಕೊಳ್ಳುತ್ತಲೇ ಇರಿ, ಜೀವನಪರ್ಯಂತ ಹೊಟ್ಟೆನೋವೇ ಇರೋಲ್ಲಾ?''

ಅವರ ಭಯಾಗ್ರಫಿ ನೆನಪಿಗೆ ಬಂತು.

''ಸಾರ್ ಹಾಸ್ಯದ ಬಗ್ಗೆ ತಮ್ಮ ಅನಿಸಿಕೆ?''

ಇನ್ನೊಂದು ಪೆಗ್ ಅವರ ಉದರ ಸೇರಿತು.

''ಹಾಸ್ಯ, ನಗುವಿನ ಹಿಂದಿನ ನೋವಿನ ಮಜಲು ಅಷ್ಟೆ! ಸಕ್ಕರೆ ಲೇಪಿತ ಕಹಿ ಮದ್ದಿನ ತರಹ. ಸಮಾಜದ ಅವ್ಯವಸ್ಥೆ, ಮೌಢ್ಯ, ಕಂದಾಚಾರ, ಮಾನವನ ವಿಷಯ ಲೋಲೋಪ್ತತೆ - ಇವೆಲ್ಲಾ ಹಾಸ್ಯಕ್ಕೆ ಸಾಮಗ್ರಿ''

''ಈಗ ಹಾಸ್ಯ ಸಾಹಿತಿಗಳು ಹೇಗೆ ಬರೆಯುತ್ತಿದ್ದಾರೆ ಸಾರ್!''

''ಪ್ರಾಬ್ಲಮ್ಮೇ ಇಲ್ಲ, ಯಾಕೆಂದರೆ ಇದು ಹಾಸ್ಯ ಲೇಖನ ಅಂತ ಮೊದಲೇ ಬರೆದುಬಿಟ್ಟಿರುತ್ತಾರೆ. ನಗುವಿನ ಹಿಂದೆ ನೋವಿಲ್ಲ ನಗುವೆ ಇರುತ್ತೆ, ಯಾಕೆಂದರೆ ನಗಬೇಕು ಆ ಹಾಸ್ಯ ಲೇಖನ ಓದಿ, ಅದಕ್ಕೇ ನಗು.''

''ಕೊನೆಯದಾಗಿ ಒಂದು ಸಂದೇಶ ತಮ್ಮಿಂದ, ನವ್ಯ ಹಾಸ್ಯ ಸಾಹಿತಿಗಳಿಗೆ?''

ನೀವು ನಗಿ, ಮನೆಯವರನ್ನು ನಗಿಸಿ. ನೆರೆಯ-ಹೊರೆಯವರನ್ನು ನಗಿಸಿ. ಜನತೆಯನ್ನು ನಗಿಸಿ. ಆದರೆ ಖಂಡಿತಾ ಬರೆಯುವುದಕ್ಕೆ ಹೋಗಬೇಡಿ. ಎಚ್ಚರಿಕೆ!''

ನನಗೆ ಹೊಟ್ಟೆ ನೋಯಲು ಪ್ರಾರಂಭವಾಯ್ತು.

ಥೂ! ಮಾಲಥೂಸ

ಗಣಕ ಯಂತ್ರಕದು
ಒಂದೇ ಆಟ
ಹೊಸ ಹೊಸ ಜೋಡಿಗೋ
ಹೊಸ ಹೊಸ ಕೂಟ

– ಶೀನೂ

# "ಲೇಡೀಸ್ ಕ್ಲಬ್‌ನಲ್ಲಿ ಹಸ್ಬೆಂಡ್ ಸ್ಪೀಚು"

**- ವೈ.ಎನ್. ಗುಂಡೂರಾವ್**

ಸುಮಾರು ದಿವಸದಿಂದ ನನ್ನವಳು ಅವರ ಕ್ಲಬ್ಬಿನಲ್ಲಿ ಒಂದು ಸಾರಿ ಭಾಷಣ ಮಾಡಬೇಕೆಂದು ಒತ್ತಾಯಿಸುತ್ತಲೇ ಇದ್ದಳು. ನಾನು ಏನಾದರೊಂದು ಸಬೂಬು ಹೇಳಿಕೊಂಡು ಮುಂದೂಡುತ್ತಲೇ ಇದ್ದೆ. ಆದರೆ ಒಂದೊಂದು ಸಾರಿ ಯೋಚನೆಯೂ ಬರುತ್ತಿತ್ತು. ಏಕೆ ನನ್ನವಳು ಹೀಗೆ ಬಲವಂತ ಮಾಡುತ್ತಿದ್ದಾಳೆಂಬುದು ಅರ್ಥವಾಗದ ವಿಷಯವಾಗಿತ್ತು. ಆದರೆ ಒಂದುಸಾರಿ ಅವರ ಸಂಘದ ಉಪಾಧ್ಯಕ್ಷೆಯಾಗಿದ್ದ ಮಾಲತಮ್ಮನವರು ಮನೆಗೆ ಬಂದು "ನಮ್ಮವರಿಗೂ ಭಾಷಣ ಮಾಡಿ, ಮಾಡಿ ಎಂದು ಹೇಳುತ್ತಲೇ ಇದ್ದೇನೆ. ಆದರೆ ಏನಾದರೊಂದು ಸಬೂಬು ಹೇಳುತ್ತಲೇ ಇದ್ದಾರೆ. ಅವರಿಗೂ ನೋಡಿ ಕಾಲೇಜು ಪಾಠ, ನಂತರ ಮನೆಪಾಠ, ಪುರುಸೊತ್ತೇ ಇರೋಲ್ಲ ಆದರೂ ಭಾಷಣ ಮಾಡಿದರೆ ಹೆಸರು ಬರುತ್ತೆ ಅಲ್ವೇನ್ರೀ..." ಎಂದು ಮಾಲತಮ್ಮ ನನ್ನವಳೊಡನೆ ಹೇಳಿದಾಗಲೇ ನನಗೆ ಅರ್ಥವಾದದ್ದು.

ಗಂಡಸರ ಕೆಲವು ಕೆಲಸಗಳಿಗೆ ಹೆಂಗಸರು ಮನೆಯೊಳಗೆ ವಿರೋಧ ವ್ಯಕ್ತಪಡಿಸಿದರೂ, ತಮ್ಮ ಗಂಡನೂ ಹೊರಗಡೆ ಭಾಷಣ ಮತ್ತೊಂದರಲ್ಲಿ ಮಿಂಚಲೆಂಬ ಆಸೆ ಇದ್ದೇ ಇರುತ್ತದೆ. ಎಂಬ ಸತ್ಯಾಂಶ ತಿಳಿದ ನಂತರ, ಈ ರೀತಿ ನನ್ನವಳಿಗೂ ತೃಪ್ತಿ, ಗೌರವ, ಹೆಸರು ಬರೋವಾಗ ನಾನೇಕೆ ಬೇಡವೆನ್ನಲಿ ಎಂದು ಒಪ್ಪಿಕೊಂಡೆ.

ಅಂದು ಸಂಜೆ ಸಭೆಯಲ್ಲಿ ಸುಮಾರು ಐವತ್ತು - ಅರವತ್ತು ಮಂದಿ ಇದ್ದವರಲ್ಲಿ, ಇಪ್ಪತ್ತೈದರಿಂದ ಎಪ್ಪತ್ತೈದರ ವಯೋಮಾನದ ವರೆವಿಗೂ ಸೇರಿದ್ದರು.

ಮಹಿಳೆಯರೇ ಎಂದು ಪ್ರಾರಂಭಿಸಿ,

ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೇ ತತ್ರದೇವತಾಃ!

ಯತ್ರೈತಾಸ್ತು ನ ಪೂಜ್ಯಂತೆ ಸರ್ವಾಸ್ತತ್ರಾ ಫಲಾಃ ಕ್ರಿಯಾಃ॥

ಎಂದು ಮನು ಸ್ಮೃತಿಯಲ್ಲಿದ್ದುದನ್ನು ಉಲ್ಲೇಖಿಸಿ "ಎಲ್ಲಿ ಹೆಂಗಸರಿಗೆ ಮಾನ್ಯತೆ ಇದೆಯೋ ಅಲ್ಲಿ ದೇವತೆಗಳು ಸಂತೋಷಪಡುತ್ತಾರೆ, ಎಲ್ಲಿ ಅವರಿಗೆ

ಮನ್ನಣೆ ಇಲ್ಲವೋ ಅಲ್ಲಿ ಎಲ್ಲ ಕೆಲಸಗಳೂ ವ್ಯರ್ಥ ಎಂದು ಮಹಿಳೆಯರಿಗೆ ಸಮಾಜದಲ್ಲಿ ದೊರೆಯುತ್ತಿರುವ ಗೌರವದ ಬಗ್ಗೆ ಸುಮಾರು ಮುಕ್ಕಾಲು ಗಂಟೆ ಭಾಷಣ ಬಿಗಿದು ಚಪ್ಪಾಳೆ ಗಿಟ್ಟಿಸಿದೆ.

ನಾ ಭಾಷಣ ಬಿಗಿದರೆ ನನ್ನವಳ ಮುಖವೂ ಬಿಗಿದುಕೊಳ್ಳಬೇಕೇ! ಭಾಷಣ ಮುಗಿಸಿ ಮನೆಗೆ ಹೋಗುತ್ತಿದ್ದಂತೆ ಮೈಮೇಲೆ ಎಗರಿ ಬಂದಳು. ''ಅಲ್ಲಾರಿ, ಮನೆಯಲ್ಲಿ ನನ್ನನ್ನು ನೀವು ಯಾವರೀತಿ ನಡೆಸಿಕೊಳ್ಳುತ್ತಿದ್ದೀರಾ? ನನ್ನ ಮಾತಿಗೆ ಯಾವ ಕಿಲುಬು ಕಾಸಿನ ಮರ್ಯಾದೆಯನ್ನು ಕೊಡುತ್ತಿಲ್ಲ. ನನಗೇ ಸರಿಯಾಗಿ ಮರ್ಯಾದೆ ಕೊಡದೇ ಇರುವಾಗ ಮಹಿಳೆಯರಿಗೆ ಎಲ್ಲಿ ಮಾನ್ಯತೆ ಇದೇಯೋ ಅಲ್ಲಿ ದೇವತೆಗಳು ಸಂತೋಷ ಪಡುತ್ತಾರೆ ಹಾಗೆ... ಹೀಗೆ... ಏನೇನೋ ರೈಲು ಬಿಟ್ಟು, ಮನೆಯಲ್ಲಿ ಮಾತ್ರ ಹೆಂಡತಿಯನ್ನು ಮೂಲೆಗೆ ತಳ್ಳಿದ್ದೀರಾ. ನನ್ನ ಮಾತು ಅಂದ್ರೆ ನಿಮಗೆ ಅಷ್ಟಕಷ್ಟೆ. ಜೊತೆಗೆ ನೀವು ಹೊರಗಿನ ಹೆಂಗಸರ ಚಪ್ಪಾಳೆ ಗಿಟ್ಟಿಸಲು ಬೊಗಳೆ ಬಿಡೋದು ಸಾಕು, ನೀವು ಭಾಷಣ ಮಾಡೋದು ಸಾಕು ಎಂದು ಠರಾವು ಪಾಸುಮಾಡಿಯೇ ಬಿಟ್ಟಳು. ಇಲ್ಲಿಗೆ ನನ್ನ ಭಾಷಣದ ಹುಚ್ಚು ಮುಗಿಯಿತು ಎಂದು ಸುಮ್ಮನಾದೆ.

ಇನ್ನೊಮ್ಮೆ ಬೇರೊಂದು ಲೇಡೀಸ್ ಕ್ಲಬ್ಬಿನಲ್ಲಿ ಭಾಷಣ ಮಾಡುವ ಅವಕಾಶ ಬಂತು. ಹಿಂದಿನ ಅನುಭವದಿಂದ ನನ್ನವಳಿಗ್ಯಾಕೆ ಇರುಸು - ಮುರುಸು ಮಾಡುವುದೆಂದು ನಾನು ಒಪ್ಪಿಕೊಳ್ಳಲಿಲ್ಲ. ಆದರೆ ಆ ಸಂಘದವರು ಬಹಳ ಬಲವಂತ ಮಾಡಿದ್ದರಿಂದ ಒಪ್ಪಿಕೊಂಡೆ. ಆದರೆ ಭಾಷಣ ಮಾಡಲು ಹೊರಡುವ ಮುಂಚೆಯೇ ''ನನ್ನ ಮೇಲೆ ಯಾವ ರೀತಿಯ ಅಪವಾದವನ್ನು ಹೊರಿಸದಂತೆ ಭಾಷಣ ಮಾಡಬೇಕೆಂದು ತಾಕೀತು ಮಾಡಿದಳು''.

ಆದರೆ ಆ ಕ್ಲಬ್ಬಿನ ಲಲನಾಮಣಿಗಳೇ ''ಗಂಡಂದಿರ ಸಾಹಿತ್ಯ, ಬರವಣಿಗೆಗೆ ಹೆಂಡತಿಯರ ಕೊಡುಗೆ'' ಎಂಬ ವಿಷಯ ಕೊಟ್ಟಿದ್ದರಿಂದ ನನಗೂ ಮಾತನಾಡಲು ಒಳ್ಳೆಯ ವಿಷಯವೇ ದೊರೆಯಿತೆಂದು ಭಾಷಣ ಬಿಗಿದೆ.

ಮನೆಯ ಹೆಂಗಸರು ತಮ್ಮ ಗಂಡಂದಿರಿಗೆ ಯಾವ ಯಾವ ರೀತಿ ಬರವಣಿಗೆಯ ಕೆಲಸಕ್ಕೆ ಸಹಾಯ ಮಾಡುತ್ತಾರೆಂದು ವಿವರಿಸುತ್ತಾ -

ಕವಿ: ಕರೋತಿ ಕಾವ್ಯಾನಿ ರಸಂ ಜಾನಾನಿ ಪಂಡಿತಃ।

ತರು: ಸೃಜತಿ ಪುಷ್ಪಾಣಿ ಮರುದ್ವಹತಿ ಸೌರಭಂ॥

ಕವಿಯು ಕಾವ್ಯವನ್ನು ರಚಿಸುತ್ತಾನೆ, ರಸವನ್ನು ಪಂಡಿತನು ತಿಳಿಯುತ್ತಾನೆ, ಮರಗಳು ಹೂಗಳನ್ನು ಬಿಡುತ್ತವೆ, ಗಾಳಿ ಸುವಾಸನೆಯನ್ನು ಒಯ್ಯುತ್ತವೆ ಮತ್ತು ಹೆಂಡತಿಯು, ಗಂಡನು ಬರೆದುದನ್ನು ಓದಿ ವಿಶ್ಲೇಷಿಸುತ್ತಾಳೆ ಎಂದು ಹೇಳುತ್ತಾ

ಸುಭಾಷಿತದಲ್ಲಿಲ್ಲದಿದ್ದರೂ ಕಡೇ ಅಂಶವಾದ 'ಹೆಂಡತಿಯು ಗಂಡನು ಬರೆದುದನ್ನು ಓದಿ ವಿಶ್ಲೇಷಿಸುತ್ತಾಳೆ' ಎಂದು ಸೇರಿಸಿ, ಆದರೆ ಕೆಲವರು ಇದಕ್ಕೆ ಅಪವಾದವಿರಬಹುದು. ಅವರ ಪಾಡಿಗೆ ಅವರು ಅಡಿಗೆಯ ಮನೆಯ ಕೆಲಸಲ್ಲೋ, ಮತ್ತೊಂದರಲ್ಲೋ ತೊಡಗಿಕೊಂಡಿರಬಹುದು ಎಂದು ಹೇಳಿ ಭಾಷಣ ಮುಗಿಸಿದೆ.

ಭಾಷಣ ಮುಗಿದ ನಂತರ ಧುಮಗುಡುತ್ತಲೇ ನನ್ನವಳು ನನ್ನೊಟ್ಟಿಗೆ ಮನೆಗೆ ಬಂದಳು. ''ಅಲ್ರೀ, ಕೆಲವರು ಅಪವಾದವಿರಬಹುದು, ಅವರ ಪಾಡಿಗೆ ಅವರು ಅಡಿಗೆಯ ಮನೆಯಲ್ಲೋ, ಮತ್ತೊಂದರಲ್ಲೋ ತೊಡಗಿಕೊಂಡಿರುತ್ತಾರೆ ಎಂದು ಹೇಗೆ ಹೇಳಿದಿರಿ? ನಾನೇನೂ ನಿಮ್ಮ ಬರವಣಿಗೆಗೆ ಸಹಾಯವನ್ನೇ ಮಾಡುತ್ತಿಲ್ಲವಾ? ನೀವು ಬರವಣಿಗೆಗೆ ಶುರು ಮಾಡಿದಾಗ ಹುಡುಗರು ಆಟವಾಡುತ್ತಾ ಗಲಾಟೆ ಮಾಡದಂತೆ ಅವರಿಗೆಲ್ಲಾ ಚಾಕೊಲೇಟ್ ಕೊಟ್ಟು ದೂರಕ್ಕೆ ಕಳುಹಿಸುವುದಿಲ್ಲವಾ? ನಿಮಗೆ ಬೇಕು ಬೇಕಾದಾಗ ಕಾಫಿ, ಟೀ ಸರಬರಾಜು ಮಾಡುವುದಿಲ್ಲವಾ? ನೀವು ಹೇಳಿದಂತೆ, ನೀವು ಬರೆದುದನ್ನು ಓದಿ, ವಿಮರ್ಶಿಸುವಷ್ಟು ಜ್ಞಾನವಿಲ್ಲದಿರಬಹುದು, ಒಪ್ಪಿಕೊಳ್ಳುತ್ತೇನೆ, ಆದರೆ ಒಂದಂತು ತಿಳ್ಕೊಳ್ಳಿ ''ನಿಮ್ಮ ಸಾಹಿತ್ಯ ವ್ಯವಸಾಯದಲ್ಲಿ, ನನ್ನಿಂದ ಆಗುತ್ತಿರುವ ಸಹಾಯ ಅತ್ಯಲ್ಪ, ನಾನೇನು ಮಾಡದಿದ್ದರೂ ನಿಮಗೆ ತೊಂದರೆ ಕೊಡದೆ ನನ್ನಷ್ಟಕ್ಕೆ ನಾನು ತೆಪ್ಪಗಿದ್ದೇನಲ್ಲಾ ಇದೇನು ಸಾಮಾನ್ಯವಾದ ಕೆಲಸವಾ?'' ಎಂದು ನನ್ನನ್ನೇ ಪ್ರಶ್ನಿಸಿದಾಗ ನಿಜಕ್ಕೂ ಎಂಥ ಸೂಕ್ತ ಉತ್ತರ ನೀಡಿದ್ದಾಳೆ ಎಂದೆನಿಸಿದಾಗ ಉತ್ತರಿಸಲಾರದೆ ಸುಮ್ಮನಾಗಬೇಕಾಯಿತು.

''ನನಗೆ ಅವಹೇಳನ ಮಾಡುವಂತೆ ಇನ್ನೆಂದೂ ನೀವು ಕ್ಲಬ್ಬಿನಲ್ಲಿ ಭಾಷಣ ಬಿಗಿಯೋದು ಬೇಡ'' ಎಂದು ಠರಾವು ಪಾಸು ಮಾಡುವಲ್ಲಿ ನನ್ನನ್ನು ಒಂದು ಇತ್ಯರ್ಥಕ್ಕೆ ಬರುವಂತೆ ಮಾಡಿದ್ದಳು.

ಹೀಗೆ ನಮ್ಮಿಬ್ಬರಲ್ಲಿ ಯಾವುದಾದರೊಂದು ಎಡವಟ್ಟುಗಳು ನಡೆಯುತ್ತಿದ್ದರೂ ನಾನೊಬ್ಬ ಭಾಷಣಕಾರನಾಗಲೇಬೇಕೆಂಬ ಆಸೆಯು ಬಲಿಯುತ್ತಲೇ ಇತ್ತು. ಪ್ರತಿಯೊಬ್ಬ ಪುರುಷನ ಯಶಸ್ಸಿನ ಹಿಂದೆಯೂ ಮಹಿಳೆಯೊಬ್ಬಳು ಇದ್ದೇ ಇರುತ್ತಾಳಂತೆ. ನನ್ನ ಭಾಷಣದ ಯಶಸ್ಸಿನ ಹಿಂದೆಯೂ ನನ್ನವಳ ಕೈವಾಡವಿದ್ದೇ ಇತ್ತು.

ಮಹಿಳಾ ಕ್ಲಬ್ಬಿನಲ್ಲಿ ಭಾಷಣ ಮಾಡುವುದನ್ನು ನಿಲ್ಲಿಸಿದ ನಂತರ ಹೊರ ಊರುಗಳಲ್ಲಿ ಭಾಷಣ ಬಿಗಿದು ಕೊಂಚ ಪ್ರಸಿದ್ಧಿಯನ್ನೂ ಸಂಪಾದಿಸಿದ್ದೆ. ಒಮ್ಮೆ ಮಹಿಳಾ ಸಂಘದಿಂದ ಭಾಷಣಕ್ಕೆ ಕರೆಬಂದಾಗ ಬಿಲ್‌ಕುಲ್ ಬೇಡವೆಂದು ನಿರಾಕರಿಸಿದಳು. ಆದರೂ ನನಗೆ ಭಾಷಣ ಬಿಗಿಯುವಾಸೆ. ಕರೆಯಲು

ಬಂದವರು ಸಾನೊಪ್ಪದಿದ್ದಾಗ ನನ್ನ ಹೆಂಡತಿಯ ಮುಖ ನೋಡತೊಡಗಿದರು. ''ಇಲ್ಲಾ ಅವರಿಗೆ ಆರೋಗ್ಯ ಸರಿಯಿಲ್ಲ, ಹಾಗೆ... ಹೀಗೆ...'' ಎಂದು ಏನೇನೋ ಸಬೂಬು ಹೇಳಿದರೂ ಬಂದವರು ಬಿಡಬೇಕಲ್ಲ, ಅವರು ಬಿಡಲೊಲ್ಲರು, ಇವಳೂ ಒಪ್ಪಲೊಲ್ಲಳು ಕಡೆಗೆ ಇವಳೇ ಸೋಲಬೇಕಾಯಿತು. ಆದರೆ ಭಾಷಣಕ್ಕೆ ಹೋಗುವ ಮುಂಚೆ ಪುನಃ ನನ್ನವಳಿಂದ ಭಾಷಣದ ನಿರ್ಬಂಧಕ್ಕೊಳಗಾದೆ. ''ತನಗೆ ಅಪಮಾನಿಸುವ, ಹೀಗಳೆಯುವ, ಮೂದಲಿಸುವ ಮಾತುಗಳಿಂದ ನನ್ನನ್ನು ಉದ್ದೇಶಿಸಬಾರದೆಂದು ತಾಕೀತು ಮಾಡಿದಳು'' ಸರಿ ಎಂದು ಒಪ್ಪಿಕೊಂಡೆ.

ಅಂದು ಭಾಷಣ ಪ್ರಾರಂಭಿಸಿದೆ. ಮಹಿಳಾ ಮಣಿಗಳಿಗೆ ಪ್ರಿಯವಾಗುವಂತಹ ವಿಷಯವನ್ನೆತ್ತಿಕೊಂಡು ಸುಮಾರು ಅರ್ಧಗಂಟೆ ಕೊರೆದೆ. ''ಇತ್ತೀಚೆಗೆ ನನ್ನ ಮಾತು ಕೇಳದವರೇ ಇಲ್ಲ ಎಂದು ಹೇಳಬಹುದು'' ಎಂದು ಸ್ವಲ್ಪ ಜಂಭದಿಂದ ಮಾತಾಡಿದೆ. ಇಲ್ಲೇ ಬಂದದ್ದು ತಾಪತ್ರಯ. ಅಲ್ಲೇ ಹಿಂದಿನ ಸಾಲಿನಲ್ಲಿ ಕುಳಿತಿದ್ದ ಮಹಿಳೆಯೊಬ್ಬಳು ಕಿಸಕ್ಕೆಂದು ನಕ್ಕು ಎದ್ದು ನಿಂತು ''ನಿಮ್ಮ ಮನೆಯವರು ನಿಮ್ಮ ಮಾತು ಕೇಳ್ತಾರಾ? ಎಂದುಬಿಡಬೇಕೇ! ಅವರೇನೋ ತಮಾಷೆಯಾಗಿ ಕೇಳಿದ್ದಿರಬಹುದು. ಭಾಷಣದ ಓಘದಲ್ಲಿ ನಾನೂ ಒಂದು ತಪ್ಪು ಮಾಡಿದ್ದೆ. ''ನನ್ನ ಭಾಷಣವನ್ನು ಕೇಳದವರೇ ಇಲ್ಲ ಅನ್ನುವುದಕ್ಕೆ ಬದಲಾಗಿ ನನ್ನ ಮಾತು ಕೇಳದವರೇ ಇಲ್ಲ'' ಎಂದದ್ದೇ ಫಜೀತಿಗಿಟ್ಟುಕೊಂಡಿತು. ಹೇಗೋ ಏನೋ ಉತ್ತರಿಸಿ ಆ ಮಹಿಳಾ ಮಣಿಯನ್ನು ತೃಪ್ತಿಪಡಿಸಿ ಕುಳ್ಳಿರಿಸಿದೆ.

ನನ್ನವಳಿಗೆ ಕೋಪ ಬಂದಿದೆ ಎಂಬುದು ಅರ್ಥವಾಗಿತ್ತು. ಭಾಷಣ ಮುಗಿಸಿ ಮನೆ ತಲುಪಿದ ತಕ್ಷಣ ತರಾಟೆಗೆ ತೆಗೆದುಕೊಂಡಳು. ''ಅದ್ಹ್ಯಾಗ್ರಿ ಅವಳು ನಿಮ್ಮ ಮಾತು ಕೇಳ್ತಾಳೆ ಅಂತ ರಾಜಾರೋಷವಾಗಿ ಪ್ರಶ್ನಿಸಿದಳು? ಅವಳಿಗೂ ನಿಮಗೂ ಏನ್ರೀ ಸಂಬಂಧ? ಹೀಗೆ ಮನೆ ವಿಷ್ಯ ಗೊತ್ತಿಲ್ದೆ ಇದ್ರೆ ನಿಮ್ಗೆ ಪ್ರಶ್ನೆ ಮಾಡಲು ಹ್ಯಾಗ್ರೀ ಅವಳಿಗೆ ಧೈರ್ಯಬಂತು? ನಿಮ್ಮ ಅವಳ ಸ್ನೇಹ ಎಷ್ಟು ದಿನದಿಂದ ನಡೀತಿದೆ? ಹೀಗೇ ಏನೇನೋ ಪ್ರಶ್ನಿಸತೊಡಗಿದಾಗ ಈ ಭಾಷಣದ ಹುಚ್ಚಿಗೆ ತಡೆಹಾಕದಿದ್ದರೆ ಮನೆಯಲ್ಲಿ ನೆಮ್ಮದಿ ನೆಲೆಸುವುದಿಲ್ಲ ಎನಿಸಿ ಇತ್ತೀಚೆಗೆ ಯಾವ ಮಹಿಳಾ ಸಂಘದಲ್ಲೂ ಭಾಷಣ ಮಾಡಲು ಒಪ್ಪಿಕೊಳ್ಳಲಿಲ್ಲ, ಬೇರೆ ಸಮಾರಂಭಗಳಿಗೆ ಹೋಗಿ ಭಾಷಣ ಮಾಡಲು ನನ್ನವಳ ಅಭ್ಯಂತರವೇನಿಲ್ಲ. ಆದರೆ ಮಹಿಳಾ ಸಂಘಗಳಿಗೆ ಎಂದರೆ ಅವಳದು ಕಡ್ಡಾಯ ಹಾಜರಾತಿ ಇರುವುದರಿಂದ ಅಲ್ಲಿ ಭಾಷಣ ಮಾಡುವುದನ್ನು ನಿಲ್ಲಿಸಿದ್ದೇನೆ. ಈಗ ಮನೆ ಕಾರ್ಗಿಲ್ ಆಗುವುದು ತಪ್ಪಿ ನೆಮ್ಮದಿ ನೆಲೆಸಿದೆ.

# ಗ್ಲಾಸ್‌ಮೇಟ್

– ಕಮಲಾ ರಾಮಸ್ವಾಮಿ

೧೯೯೯ ಕಳೆದು ಮಿಲೆನಿಯಂನ್ನು ಸ್ವಾಗತಿಸುವ ಡಿಸೆಂಬರ್ ೩೧ರ ರಾತ್ರಿ ಬಹು ಪ್ರಶಸ್ತ. ಹೊಸ ವರ್ಷದ ಈ ಸ್ವಾಗತಕ್ಕೆ ಖಂಡಿತ ಬಾ ಎಂದು ಒಲವಿನ ಗೆಳತಿಯ ಕರೆ ಬಂದಾಗ ನಾಲ್ಕು ವರ್ಷದ ಹಿಂದೆ ಅವರ ಮನೆಯಲ್ಲಿ ನಡೆದ ಘಟನೆ ನೆನಪಿಗೆ ಬಂತು.

''ಇಲ್ನೋಡು; ನೀನು ಬರುವ ಹಾಗಿದ್ರೆ ೩೧ಕ್ಕೆ ಇಲ್ಲಿ ಇರೋ ಹಾಗೆ ಅಡ್ಜೆಸ್ಟ್ ಮಾಡಿಕೊಂಡು ಬಾ. ನಮ್ಮನೇಲೇ ಪಾರ್ಟಿ, ನಂ ಎಲ್ಲಾ ಫ್ರೆಂಡ್ಸನೂ ನೋಡ್ದಹಾಗೆ ಆಗುತ್ತೆ'' ಸುಭದ್ರಾ ಮೊದಲೇ ಹೇಳಿದ್ಳು.

ಅಂತೆಯೇ ಡಿಸೆಂಬರ್ ೩೧ ರಂದು ಅಲ್ಲಿದ್ದೆ. ರಾತ್ರಿ ೯ ಘಂಟೆಗೆಲ್ಲಾ ಹೊಸ ವರ್ಷವನ್ನು ಸ್ವಾಗತಿಸುವ ಮೋಜಿನ ಪಾರ್ಟಿ ಶುರುವಾಯಿತು. ಸುಭದ್ರಾ ಮತ್ತು ಅವಳ ಪತಿ ಶ್ರೀ ರಾವ್ ಇಬ್ಬರೂ ಆತಿಥ್ಯಕ್ಕೆ ಹೆಸರುವಾಸಿ. ಅತಿಥಿಗಳೆಲ್ಲಾ ಬಂದ್ರು. ೯-೩೦ಕ್ಕೆ ''ಜಿ.ಎಂ. ಬಂದ್ರು'' ಎಂದು ಎಲ್ಲರೂ ಎದ್ದು ನಿಂತ್ರು. ಶ್ರೀಮತಿ ಮತ್ತು ಶ್ರೀ ಮೆಹರಾ ದಯ ಮಾಡಿಸಿದರು. ''ಚೀರ್ಸ್'' ನೊಂದಿಗೆ ಪಾರ್ಟಿ ಆರಂಭವಾಯ್ತು.

ಈ ಪಾನಕ, ಪುಣ್ಯಾರದ ಆತಿಥ್ಯಕ್ಕೆ ಅದರದೇ ಆದ ಒಂದು ಸೊಗಸಿದೆ. ಆ 'ಮಧುಶಾಲಾ' ಮಕ್ಕಳೆಲ್ಲಾ ಲಗುಬಿಗು ಮರೆತು ನಿಸ್ಸಂಕೋಚವಾಗಿ ಮಾತನಾಡಲು ಷುರು ಮಾಡಿದರು. ಆದರೆ ಆ ಪಾನಗೋಷ್ಠಿಗೆ ಕಳೆ ಬಂದಿದ್ದು ರಾಮಾವತಾರ ಅಗರವಾಲನಿಂದ. ''ನಂಗೆ ಎಷ್ಟು ಕುಡಿದ್ರೂ ಏನೂ ಆಗುವುದಿಲ್ಲ'' ಎಂದು ಮೇಲಿಂದ ಮೇಲೆ ಗ್ಲಾಸಿಗೆ ಬಗ್ಗಿಸಿಕೊಳ್ಳುತ್ತಲೇ ಇದ್ದ. ''ಅಬ್ಬಾ! ಎಂಥಾ ಕೆಪಾಸಿಟಿ ನಿಂದು'' ಎಂದು ಅವನ್ನ ಉಬ್ಬಿಸಿದ ಜಗದೀಶ, ನನ್ನ ಕಿವಿಯಲ್ಲಿ ಕನ್ನಡದಲ್ಲಿ ಉಸಿರಿದ; ''ಬಿಟ್ಟಿ ಸಿಕ್ಕರೆ ಮೂಗು ಮಟ್ಟ ಹೊಡೆಯುವ ಮಾರ್ವಾಡಿ ಇವನು'' ಹೆಸರು ರಾಮಾವತಾರ - ಪುರುಷೋತ್ತಮನ್ ಹೆಸರು - ಎಂತಹ ವಿಪರ್ಯಾಸ ಎಂದುಕೊಂಡೆ. ''ಒಂದು ಪೀಪಾಯಿ ಹಾಕಿದ್ರೂ ನಂಗೆ ತಲೆಗೇರೋಲ್ಲ'' ಎನ್ನುತ್ತಾ ಎದ್ದು ನೆಟ್ಟಗೆ ನಿಂತ. ''ಧೊಪ್'' ಎಂದು ಬಿದ್ದ. ಸೀದಾ ಮುಖದ ಮೇಲೆ ಬಿದ್ದುದರಿಂದ ಮೂಗು ಪೆಟ್ಟಾಗಿ ರಕ್ತ ಬಂತು. ರಾವ್, ಮತ್ತಿತರರು ಅವನ್ನ ಎತ್ತಿ ಪಕ್ಕದ ರೂಂನಲ್ಲಿ ಮಲಗಿಸಿ ಶುಶ್ರೂಷೆ ನಡೆಸಿ ಬಂದ್ರು.

ಬಹಳ ಸಂಕೋಚದ ಸ್ವಭಾವದ ಇಕ್ಬಾಲ್‌ಸಿಂಗ್ ಕೂಡಾ ಭಾಂಗ್ರಾ ನೃತ್ಯಕ್ಕೆ ಹೆಜ್ಜೆ ಹಾಕಿದ. ಅದನ್ನು ಕಂಡು ಪೋಲಿಸ್ ಅಧಿಕಾರಿ ಎಸ್.ಐ. ನಾಯ್ಡು ನೆಲದ

ಮೇಲೆ ಕೂತು "ಮನವಾಲಗಿಂಪರಾ" ಕೀರ್ತನೆಯನ್ನು ಕೆಟ್ಟ ರಾಗದಲ್ಲಿ ತಾಳ ಹಾಕ್ಕೊಂಡು ಹಾಡಲು ಶುರು ಮಾಡಿದರು. ಕಪಿಶೆಯನ್ನು ಕುಡಿದ ಕುಪಿಗಳಂತೆ ಆಡುತ್ತಿದ್ದ ಅವರನ್ನೆಲ್ಲಾ ಕಂಡು ನಗು ಬಂದರೂ, ಆ ಗ್ಲಾಸಿನ ಗಮ್ಮತ್ತಿಗೆ ಬೆರಗಾದೆ!

ರಾತ್ರಿ ೧೨.೩೦ಕ್ಕೆ ಹೊಸ ವರ್ಷದ ತುಂಬು ಸ್ವಾಗತದ ಸಂಭ್ರಮ ಶಿಖರಕ್ಕೇರಿತು, ಸುಭದ್ರಾ ಊಟದ ವ್ಯವಸ್ಥೆಗೆ ಹೊರಟಳು. ನಾನು ಎದ್ದೆ, "ಸುಭಿ! ನೀನು ಏನೂ ತಿಳಿದುಕೊಳ್ಳದಿದ್ದರೆ ನಾನು ಮಲಗುತ್ತೇನೆ. ನೆನ್ನೆ ರಾತ್ರಿನೂ ನಿದ್ದೆ ಇಲ್ಲ. ನಾಳೆ ರಾತ್ರಿ ಮತ್ತೆ ಪ್ರಯಾಣ..."

"ಅಯ್ಯೋ! ತಿಳಿದುಕೊಳ್ಳುವುದೇನು ಬಂತು! ಪಾಪ! ಟೈಯರ್ಡ್ ಆಗಿದ್ದೀ ಮಧ್ಯಾಹ್ನವೆಲ್ಲಾ ಆಫಿಸೂಂತ ಅಲೆದಿದ್ದೀ. ಟೇಬಲ್ ಮೇಲೆ ಬೂಫೆಗೆ ಅರೇಂಜ್ ಮಾಡಿದೆ. ಏನ್ ಬೇಕೊ ಅದನ್ನ ತೆಗೆದುಕೊ. ಊಟ ಮಾಡಿ ಮಲಗಿಬಿಡು. ಬೆಳಿಗ್ಗೆ ೯ ಘಂಟೆ ತನಕ ಯಾರು ಏಳಲ್ಲ - ನೀನೂ ನಿಧಾನವಾಗಿ ಏಳು."

"ಅಯ್ಯೋ! ನನಗೆ ಬೆಳಿಗ್ಗೆ ಬೇಗ ಏಳುವ ಅಭ್ಯಾಸ..."

"ಅದಕ್ಕೇನಂತೆ, ಎದ್ದು ಕೆಳಗೆ ಬಾ, ನರಸಮ್ಮ ಆರು, ಆರೂವರೆಗೆ ಬರ್ತ್ತಾಳೆ. ನಿಂಗೆ ಕಾಫಿ ಮಾಡಿಕೊಡ್ತ್ತಾಳೆ, ಆಯ್ತಾ."

"ತುಂಬಾ ಥ್ಯಾಂಕ್ಸ್ ಸುಧೀ! ಹೋಗು ನಿನ್ನ ಗೆಸ್ಟ್ಸ್‌ನ ಅಟೆಂಡ್ ಮಾಡು, ಗುಡ್ ನೈಟ್ ಎಂಡ್ ಎ ವೆರಿ ಹ್ಯಾಪಿ ನ್ಯೂ ಇಯರ್"



ಬೆಳಿಗ್ಗೆ ಎದ್ದಾಗ ಆರಾಗಿತ್ತು. ಕೆಳಗಿಳಿದು ಬಂದು ಕಾಂಪೌಂಡಿನಲ್ಲಿ ಅಡ್ಡಾಡುತ್ತಿದ್ದೆ, ಪೇಪರ್ ಬಂತು, ನಸುಗತ್ತಲು ಹೋಗಿ ಬೆಳ್ಳಂಬೆಳಕಾಯಿತು. ಕೆಲಸದ ನರಸಮ್ಮನೂ ಬಂದಳು. ನನ್ನನ್ನು ನೋಡಿ "ಎದ್ದಿರಾ; ಹಾಲು ತಂದಿದ್ದೇನೆ. ಕಾಫಿ ಮಾಡಿಕೊಡುತ್ತೇನೆ" ಎಂದು ಒಳಗೆ ಹೋದಳು. ನರಸಮ್ಮ ಸುಭದ್ರಳ ಮನೆಗೆ ಬಂದು ಹದಿನೈದು ವರ್ಷವಾಗಿತ್ತು. ಐವತ್ತು ವರ್ಷದಾಕೆ. ಕೆಲಸದಲ್ಲಿ ಬಲು ಅಚ್ಚುಗಟ್ಟು. ಅಡಿಗೆಮನೆ, ಊಟದ ಮನೆ ನೆನ್ನೆ ನಡೆದ ಪಾರ್ಟಿಯ ಗತ ವೈಭವವನ್ನು ಸಾರುತ್ತಿತ್ತು. ಸಿಂಕಿನ ತುಂಬಾ ಪಾತ್ರೆಗಳು. ಡೈನಿಂಗ್ ಟೇಬಲ್ ಮೇಲೆ ಚೆಲ್ಲಾಡಿದ್ದ ಸಾಮಾನುಗಳು, ಫ್ರಿಡ್ಜ್ ಪಕ್ಕದಲ್ಲಿ ಪೇರಿಸಿಟ್ಟ ಎಂಜಲು ತಟ್ಟೆಗಳು... ನರಸಮ್ಮ ಮೊದಲು ಕಾಫಿ ಮಾಡಿಕೊಟ್ಟು, ಅಡಿಗೆ ಮನೆ ಕ್ಲೀನಿಂಗ್‌ಗೆ ಸೆರಗು ಕಟ್ಟಿದಳು. ನರಸಮ್ಮ ಪಕ್ಕಾ ಸಸ್ಯಾಹಾರಿ. ಪಾಪ! ಈ ವೆಜ್, ನಾನ್‌ವೆಜ್ ಎಲ್ಲಾ ಸೇರಿದ ಕಸ, ಮುಸರೆ ಹೇಗೆ ಮಾಡುತ್ತಾಳೋ ಎಂದುಕೊಂಡೆ.

ಕಾಫಿ ಕುಡಿದು ಪೇಪರ್ ಓದಿದ ಮೇಲೆ ಘಂಟೆ ಏಳುಕಾಲಾಗಿತ್ತು. ಸ್ನಾನ ಮಾಡೋಣವೆಂದು ಮಹಡಿ ಹತ್ತಿದೆ. ಫೋನ್ ಟ್ರಿಂಗ್, ಟ್ರಿಂಗ್ ಎಂದಿತು. ರಾತ್ರಿಯೇ ಸುಭದ್ರಾ ಬೆಡ್‌ರೂಂ ನಲ್ಲಿದ್ದ ಫೋನ್‌ನ ಆಚೆ ಇಟ್ಟಿದ್ದಳು - ಡಿಸ್ಟರ್ಬ್ ಆಗದಿರಲೆಂದು ಪಾಪ! ರಾತ್ರಿ ಎಷ್ಟು ಹೊತ್ತಾಯಿತೋ ಏನೋ, ಅವರಿಗ್ಯಾಕೆ ತೊಂದರೆ ಎಂದು ನಾನೇ ರಿಸೀವರ್ ಎತ್ತಿದೆ.

''ಹಲೋ, ಹಲೋ, ಕೌನ್ ಮಿಸೆಸ್ ರಾವ್'' ಆ ಕಡೆಯಿಂದ ಹೆಣ್ಣುಧ್ವನಿಯೊಂದು ಆತುರಾತುರವಾಗಿ ಕೇಳಿತು.

''ನೋ, ಮಿಸೆಸ್ ರಾವ್ ಇನ್ನೂ ಎದ್ದಿಲ್ಲ. ಏನಾದ್ರೂ ಮೆಸೇಜ್ ಇದ್ರೆ ಹೇಳಿ'' ಎಂದೆ.

''ಅಯ್ಯೋ! ಸಾಧ್ಯವಿಲ್ಲ. ತಕ್ಷಣ ಅವರ್ನ ಎಬ್ಬಿಸಿ. ನಾನು ಮಿಸೆಸ್ ಮೆಹರಾ ಮಾತಾಡ್ತಾ ಇರೋದು. ಬಹಳ ಅರ್ಜೆಂಟು. ಮಿಸೆಸ್ ರಾವ್‌ನ ಎಬ್ಬಿಸಿ'' ಓಹ್! ಮೆಹರಾ ಜಿ.ಎಂ. ಹೆಂಡತಿ! ರಾವ್ ಅವರ ಬಾಸ್ ಹೆಂಡತಿ!

''ನಾನೀಗಲೇ ಎಬ್ಬಿಸುತ್ತೇನೆ. ಅವರಿಗೆ ತಿರುಗಿ ಟೆಲಿಫೋನ್ ಮಾಡಲು ಹೇಳಲೆ?''

''ಇಲ್ಲಾ ಇಲ್ಲಾ, ತುಂಬಾ ಅರ್ಜೆಂಟು, ನಾನು ಲೈನ್‌ನಲ್ಲೇ ಇರ್ತೇನೆ.''

ಬೆಡ್‌ರೂಂ ಬಾಗಿಲನ್ನು ಕಟಕಟಾಯಿಸಿದೆ. ಸುಭದ್ರಾ ಕಣ್ಣುಜ್ಜಿಕೊಳ್ಳುತ್ತಾ ಎದ್ದಳು. ''ಸಾರಿ ಸುಭೀ, ಎಬ್ಬಿಸಬೇಕಾಯ್ತು. ಮಿಸೆಸ್ ಮೆಹರಾ ಅರ್ಜೆಂಟಾಗಿ ನಿನ್ನ ಹತ್ರ ಮಾತಾಡ್ಬೇಕಂತೆ'' ರಿಸೀವರ್ ಅವಳಿಗೆ ಕೊಟ್ಟು ನಾನು ಸ್ನಾನಕ್ಕೆ ಹೊರಟೆ. ''ಏನು? ಎಲ್ಲಿಟ್ಟಿದ್ರಿ? ತಾಳಿ ನೋಡ್ತೀನಿ. ಡ್ರಾಯಿಂಗ್ ರೂಂನಲ್ಲೇ? ಆಂ... ಸ್ವಲ್ಪ ಇರಿ, ಹುಡುಕಿ ನೋಡಿ, ತಕ್ಷಣ ಇನ್ನೊಂದು ಹತ್ತು ನಿಮಿಷದಲ್ಲಿ ಫೋನ್ ಮಾಡ್ತೀನಿ'' ರಿಸಿವರ್ ಧಡ್ ಅಂತ ಇಟ್ಟು ಸುಭದ್ರ ಕೆಳಗೆ ಓಡಿದಳು. ಮಾತು ಕೇಳಿ ಆತಂಕವಾಯಿತು. ಪರ್ಸೊ, ಒಡವೆಯೋ, ಏನೋ ಬೆಲೆ ಬಾಳುವ ಪದಾರ್ಥವಿರಬೇಕು. ಸ್ನಾನಕ್ಕೆ ಹೋಗದೆ ಕೆಳಗಿಳಿದು ಬಂದೆ.

ಕೆಳಗೆ ಸುಭದ್ರ ''ನರಸಮ್ಮ, ನರಸಮ್ಮ'' ಎಂದು ಅವಳನ್ನು ಹುಡುಕುತ್ತಿದ್ದಳು. ಅಡಿಗೆ ಮನೆ, ಊಟದ ಮನೆ, ಡ್ರಾಯಿಂಗ್ ರೂಂ ಎಲ್ಲಾ ಕ್ಲೀನಾಗಿ ಥಳ ಥಳ ಹೊಳೆಯುತ್ತಿತ್ತು. ಮನೆ ನರಸಮ್ಮನ ಕೈ ಚಳಕದಿಂದ ಮೊದಲಿನಂತಾಗಿತ್ತು, ಆಕೆ ಹಿತ್ತಲ ಕಸ ಗುಡಿಸುತ್ತಿದ್ದಳು.

''ನರಸಮ್ಮಾ ನೀನು ಇಲ್ಲೆಲ್ಲಾದ್ರೂ ಹಲ್ಲು ನೋಡಿದ್ಯಾ'' ಸುಭದ್ರ ಕೇಳಿದಳು.

''ಹಲ್ಲು? ಏನು ಹಲ್ಲಮ್ಮ?'' ನರಸಮ್ಮನಿಗೆ ಅರ್ಥವಾಗಲಿಲ್ಲ.

''ಸುಭೀ, ಅದೇನು ಕಳೆದುಹೋಗಿದೆ, ಸರ್‍ಯಾಗಿ ಹೇಳು'' ಎಂದೆ.

''ಮೆಹರಾರವರು ಈ ದಿನ ಎಂಟೂವರೆ ಘಂಟೆ ಫ್ಲೈಟ್‌ಗೆ ಡೆಲ್ಲಿಗೆ ಹೋಗಲೇಬೇಕು, ಬಹಳ ಇಂಪಾರ್ಟೆಂಟ್ ಮೀಟಿಂಗ್ ಇದೆ. ಯಾವುದೋ ಜರ್ಮನ್ ಕೊಲಾಬರೇಷನ್ ಜೊತೆಯ ಪ್ರಾಜೆಕ್ಟಿನ ಬಗ್ಗೆ ಚರ್ಚಿಸಲು ಕ್ಯಾಬಿನೆಟ್ ಮಿನಿಸ್ಟರ್ಸ್ ಮತ್ತು ಸೆಕ್ರೆಟರಿಗಳೊಂದಿಗೆ ಮೀಟಿಂಗ್ ಮಧ್ಯಾಹ್ನ ಇದೆ. ನೆನ್ನೆ ರಾತ್ರಿ ಪಾರ್ಟಿಗೆ ಬಂದಾಗ, ಊಟ ಮಾಡುವಾಗ ಅವರು ಡೆಂಟರ್ಸ್ ತಗೆದಿಟ್ಟುಬಿಟ್ಟಿದ್ದರಂತೆ. ಹೊಸದಾಗಿ ಕಟ್ಟಿಸಿಕೊಂಡಿರುವುದರಿಂದ ಇನ್ನೂ ಅಭ್ಯಾಸವಾಗಿಲ್ಲ. ಊಟ ಮಾಡುವಾಗ ತೆಗೆದಿಟ್ಟು ಬಿಡುತ್ತಾರಂತೆ. ನೆನ್ನೆ ರಾತ್ರಿ ಆ ಡ್ರಿಂಕ್ಸ್ ಹಾವಳಿಯಲ್ಲಿ ಯಾವಾಗ ತೆಗೆದೆ, ಎಲ್ಲಿಟ್ಟೆ ಎಂಬುದನ್ನು ಮರೆತು, ಬೆಳಗೆದ್ದು ಹುಡುಕಾಡಿ, ಕಡೆಗೆ ಇಲ್ಲೇ ಎಲ್ಲೋ ಇಟ್ಟಿರಬೇಕು ಎಂದು ಫೋನ್ ಮಾಡಿದ್ದಾರೆ. ಬಾಯಲ್ಲಿ ಹಲ್ಲಿಲ್ಲದೆ 'ತಸ್‌ಪುಸ್' ಅಂತ ಹೇಗೆ ಮಾತಾಡ್ತಾರೆ ಹೇಳು.''

ನರಸಮ್ಮನಿಗೆ ಇನ್ನೂ ಅರ್ಥವಾಗಿರಲಿಲ್ಲ. ''ಏನಾಯ್ತಮ್ಮ'' ತಿರುಗಿ ಕೇಳಿದಳು ''ನರಸಮ್ಮ, ನೀನು ಇಲ್ಲಿ ಕ್ಲೀನ್ ಮಾಡಿದಾಗ ಹಲ್ಲುಗಳ ಸೆಟ್‌ನ್ನು ನೋಡಿದ್ಯಾ'' ನಿಧಾನವಾಗಿ ಕೇಳಿದೆ.

''ಹಲ್ಲುಗಳು? ಕಸದಲ್ಲಾ? ಏನೂ ಕಾಣಲಿಲ್ಲಾಮ್ಮಾ, ಕಸದಲ್ಲಿ ಹಲ್ಲು ಉದುರಿದೆ ಎಂದು ಹೇಳಿದ್ದರೆ ಹುಡುಕಿ ತೆಗೆದಿಡುತ್ತಿದ್ದೆ''

''ಹಲ್ಲುಗಳು ಅಂದ್ರೆ ಕಟ್ಟಿಸಿಕೊಂಡ ಹಲ್ಲುಗಳು ನರಸಮ್ಮ'' ಬಿಡಿಸಿ ಹೇಳಿದೆ.

''ಸ್ವಲ್ಪ ತಾಳಿ, ಜ್ಞಾಪಿಸಿಕೊಳ್ತೀನಿ! ಹೂಂ, ಹಲ್ಲುಗಳ್ನ ನೋಡಿದ್ದೆ. ರೆಫ್ರಿಜರೇಟರ್ ಮೇಲೊಂದು ತಟ್ಟೆಯಲ್ಲಿ ಯಾರೋ ತುಂಬಾ ಊಟ ಚೆಲ್ಲಿದ್ದರು, ಮಾಂಸ, ಮೂಳೇ ಚೂರು ಎಲ್ಲಾ ಹಾಗ್ಹಾಗೆ ಇತ್ತು. ಅದರ ಮೇಲೆ ಒಂದು ಜೊತೆ ಹಲ್ಲೂ ಸರಿಯಾಗಿ ಮಧ್ಯದಲ್ಲಿ ಕೂತಿತ್ತು. ಮೇಕೆ ಮರಿನೋ, ಕುರಿ ಮರೀನೋ ಹಾಗ್ಹಾಗೆ ಉಂಡೆಯಾಗಿ ಬೇಯಿಸಿ, ಹಲ್ಲುಗಳ್ನ ತೆಗೆದಿದ್ದಾರೆ ಪಾಪ! ಅಂದ್ಕೊಂಡೆ. ಎಲ್ಲಾ ತೆಗೆದು ಕಸದ ತೊಟ್ಟಿಗೆ ಹಾಕಿ ಬಂದೆ. ಮನುಷ್ಯರ ಹಲ್ಲು ಅಂತ ಗೊತ್ತಾಗಲಿಲ್ಲಮ್ಮ'' ನಿಧಾನವಾಗಿ ಹೇಳಿದಳು.

''ಬೇಗ ಹೋಗು ನರಸಮ್ಮ, ತೊಟ್ಟಿಯಲ್ಲಿ ಇದ್ದಿರಬೇಕು ಓಡು ಬೇಗ ಹೋಗು ಜಿ.ಎಂ. ಡೆಲ್ಲಿಗೆ ಹೋಗ್ಬೇಕು.''

ನರಸಮ್ಮ ಕೈಲಾದ ಮಟ್ಟಿಗೆ ಬೇಗ ಹೋದಳು, ಅಷ್ಟೆ ಬೇಗ ಹಿಂದಿರುಗಿದಳು. ''ಮುನಿಸಿಪಾಲ್ಟಿ ಬಂದು ಕಿಲೀನ್ ಮಾಡಿಬಿಟ್ಟಿದ್ದಾರೆ ತೊಟ್ಟೀನಾ. ಮೂರು ದಿನದಿಂದ ಕಸ ತುಂಬಿ ಹರೀತಾ ಇತ್ತು. ಇವತ್ತು ಬೇಗ್ನೆ ಬಂದು ಕಸ ಎತ್ತಿದ್ದಾರಮ್ಮಾ'' ನಾನೂ, ಸುಭೀ ಮುಖ ಮುಖ ನೋಡಿಕೊಂಡ್ವಿ, ವಾಹ್! ಗ್ಲಾಸ್‌ಮೇಟ್!

# ಸೀರಿಯಲ್ ಸೀರಿಯಲ್!

## (ಹೊಸ ಜಂಬ: Episode - 1)

– ಹಾ. ರಾ.

ಈ ಮೆಗಾ ಸೀರಿಯಲ್‌ಗಳು ಲೆಕ್ಕವಿಲ್ಲದಷ್ಟು ಟಿವಿ ತೆರೆಮೇಲೆ ಕಾಣಿಸಿಕೊಂಡ ಮೇಲೆ, ಇಡೀ ದಿನ ಇವುಗಳನ್ನು ತಪ್ಪದೆ ನೋಡುವ ಮಹಿಳಾ ಮಣಿಗಳು ಸೀರಿಯಲ್‌ಗಳ ಮಾತಲ್ಲದೆ ಬೇರೆ ಯಾವ ವಿಷಯಗಳನ್ನೂ ಈಗ ಮಾತಾಡುವುದಿಲ್ಲ. ನೀವು ಏನೇ ಕೇಳಿ ಅವರು ನಿಮ್ಮನ್ನು ಸೀರಿಯಲ್ಲಿಗೇ ಎಳೆದು ತರುತ್ತಾರೆ. ಜಂಬ ಬಿಗುಮಾನ ತೋರಿಸುತ್ತಾರೆ. ಧಾರಾವಾಹಿಗಳ ಒಂದೊಂದು ಭಾಗವನ್ನೂ ನೋಡಿದ ಮೇಲೆ ಕಥೆ ಮುಂದಕ್ಕೆ ಹೇಗೆ ಓಡುತ್ತೆ, ಡೈರೆಕ್ಟರು ಕಥೆಯ ಜಾಡನ್ನು ಥಟ್ಟನೆ ಬೇರೊಂದು ದಿಕ್ಕಿಗೆ ತಿರುಗಿಸಿ ಹೇಗೆ ಕುತೂಹಲವನ್ನುಂಟು ಮಾಡುತ್ತಾನೆ, ನಾಯಕಿಯನ್ನು ಮುಗಿಸಲು ಹೊಸ ಧಾರಾವಾಹಿಯಲ್ಲಿ ಯಾವ ಸಾಧನವನ್ನು ಆಯ್ಕೆ ಮಾಡ್ಕೋತಾನೆ, ಅಂದರೆ, ನೇಣೆ? ವಿಷವೆ? ಸೀಮೆ ಎಣ್ಣೆಯೆ? ಹೀಗೆಲ್ಲಾ ಆರಾಮವಾಗಿ ಕೂತು ಚರ್ಚೆ ಮಾಡುತ್ತಿರುತ್ತಾರೆ. ಧಾರಾಕಾರವಾಗಿ ಇವರ ಬಾಯಿಂದ ಹೊರ ಸೂಸುವ ಮಾತೆಲ್ಲ ಧಾರಾವಾಹಿ! ಸೀನಿದ್ದೆಲ್ಲ ಸೀರಿಯಲ್ಲು! ಕೆಮ್ಮಿದ್ದೆಲ್ಲ ರಿಕ್ಯಾಪ್! ಕೂತ್ರೆ ಒಂದು ಎಪಿಸೋಡು, ನಿಂತ್ರೆ ಒಂದು ಎಪಿಸೋಡು! ಸೀರಿಯಲ್ ಜ್ಞಾನ ಪ್ರವಾಹ ಹತ್ತಾರು ಚಾನಲ್‌ಗಳಲ್ಲಿ ಉಕ್ಕಿ ರಭಸದಿಂದ ಹರಿದು ಹೋಗುತ್ತಿರುತ್ತೆ! ಕನ್ನಂಬಾಡಿಯಲ್ಲಿ ಈ ಕೆಲಸ ನಿರಂತರವಾಗಿ ನಡೆದಿದ್ದರೆ ಚೆನ್ನೈಯವರು ಉಸಿರೆತ್ತುತ್ತಿರಲಿಲ್ಲ! ಹೋಗಲಿ, ಈಗ ದೇಶದಲ್ಲಿ ಸರ್ಕಾರ ಹೊಸ ಹೊಸ ಉದ್ಯೋಗಗಳನ್ನು 'ಜನರೇಟ' ಮಾಡುತ್ತಿರುವುದು ಪ್ರಶಂಸನೀಯ. ಅದರಂತೆ ಈಗ ಒಂದು ಹೊಸ ಉದ್ಯೋಗ ತಲೆ ಎತ್ತಿಕೊಂಡಿದೆ. ಅದೇನೆಂದರೆ ಧಾರಾವಾಹಿ ವೀಕ್ಷಕ ಸಂಶೋಧನ ಕೇಂದ್ರದವರು ಸೀರಿಯಲ್‌ಗಳ ಬಗ್ಗೆ ಕೇಳುವ ಪ್ರಶ್ನೆಗಳಿಗೆ ಪ್ರತಿವಾರವೂ ತಪ್ಪದೆ ಉತ್ತರ ಬರೆದು ಕಳಿಸುವುದು. ಇದನ್ನು ಡಿಡಿಯವರು 'ಅನಿಸಿಕೆಗಳು' ಎಂದು ಕರೆಯುತ್ತಾರೆ! ಸೀರಿಯಲ್ ನಿರ್ಮಾಪಕರಿಗೆ ಇದು ತುಂಬ ಅಮೂಲ್ಯವಾದುದು. ನಮ್ಮ ಅನಿಸಿಕೆಗಳನ್ನು ಕೇಳುವವರು ಮನೆಯೊಳಗೇ ಇಲ್ಲವಲ್ಲ ಎಂಬುದೇ ನಮ್ಮ ಕೊರಗು! ಅವರವರು ಕೇಳಿಕೊಂಡು ಬಂದಿದ್ದು ಅವರವರಿಗೆ!

ಬನ್ನಿ. ಈಗ ತಾನೆ 'ಶನಿ' ಸೀರಿಯಲ್ಲು ೬00 ಕಂತು ಮುಗಿಸಿ ಜಯಭೇರಿ ಹೊಡಿಯುತ್ತಿದೆ! ಅದರ ಕಥೆಯ ಕೊನೆಯ ಕಂತಿನಲ್ಲಿ ನಾಯಕಿ ತನ್ನ ಗಂಡನ

ವಿಚಾರದಲ್ಲಿ ಕ್ಷುಲ್ಲಕವಾಗಿ ಆಡಿದ ಮಾತುಗಳು ಸರಿಯೆ? ತಪ್ಪೆ? ಎಂದು ವೀಕ್ಷಕ ಸಂಶೋಧನ ಕೇಂದ್ರದವರು ಕೇಳಿದ ಒಂದು ಪ್ರಶ್ನೆಯನ್ನು ನಿಮ್ಮ ಗಮನಕ್ಕೆ ತರುತ್ತೇನೆ. ಸಾಮಾಜಿಕ ನೀತಿಯಲ್ಲಿ ಓತಾಸಕ್ತಿಯುಳ್ಳವರು ಇಂಥ ನಿಗೂಢ ಸಂಗತಿಗಳಿಗೆ ಸ್ಪಂದಿಸಬೇಕು ಎಂದು ಕೆಲವು ದಿವಸಗಳ ಹಿಂದೆ ಆಬ್ಕಾರಿ ಸಚಿವರೊಬ್ಬರು ಪೀಪಾಯಿಗಟ್ಟಲೆ ಮಾಡಿದ್ದ ಭಾಷಣ ನನಗೆ ಹೇಗೋ ಜ್ಞಾಪಕಕ್ಕೆ ಬಂತು! ತಕ್ಷಣ ನಾನು ಸ್ಪಂದಿಸಿದೆ! ಅಂದು ಮಧ್ಯಾಹ್ನ ನಮ್ಮ ವಸತಿ ಸಮುಚ್ಚಯದಲ್ಲಿ ಒಂದು 'ಇನ್‌ಸೈಡ್ ಪೋಲ್' ಮಾಡಿ ಅಭಿಪ್ರಾಯ ಸಂಗ್ರಹಿಸಿದೆ. ನೂರಕ್ಕೆ ನೂರರಷ್ಟು ಮಹಿಳೆಯರು 'ಸರಿ' ಎಂದೇ ಉತ್ತರ ಬರೆದುಕೊಟ್ಟಿದ್ದರು. ಇದರಿಂದ ಉತ್ತೇಜನಗೊಂಡ ನಿರ್ಮಾಪಕರು ಇನ್ನು ಮುಂದೆ ಕ್ರಾಂತಿಕಾರವೂ, ಸಮಸ್ಯಾತ್ಮಕವೂ ಕಠೋರವೂ ಆದ ಸೀರಿಯಲ್‌ಗಳನ್ನು ಮಹಿಳಾ ಲೋಕಕ್ಕೆ ಅರ್ಪಿಸುತ್ತೇವೆ ಎಂದು ಆಶ್ವಾಸನೆ ಕೊಟ್ಟರು! ಅಂತು "public opinion' ಗಳಿಸುವುದರಲ್ಲಿ ಈ ವೀಕ್ಷಕ ವರ್ಗ ಜಯಗಳಿಸಿತು. ತಮ್ಮ ಹಕ್ಕು ಬಾಧ್ಯತೆಗಳ ರಕ್ಷಣೆಗೆಂದೇ ಧಾರವಾಹಿ ವೀಕ್ಷಕರ ಸಂಘ ಎಂಬ ಒಂದು ಸಂಸ್ಥೆ ನಮ್ಮ ಬೀದಿಯಲ್ಲಿ ಈಗ ತೆರೆಯಲ್ಪಟ್ಟಿದೆ! ತಕ್ಷಣ ಸಂಪರ್ಕಿಸಿ! ಅಥವಾ ಪೋಸ್ಟ್‌ಕಾರ್ಡ್ ಬರೆಯಿರಿ.

ಸೀರಿಯಲ್‌ಗಳ ಒಂದೊಂದು ಕಥಾಭಾಗ ಮುಗಿಯುತ್ತಿದ್ದ ಹಾಗೆ ಇವರ ಬಾಯಿಂದ ಹೊರ ಹೊಮ್ಮುವ ವಿಮರ್ಶೆಗಳು ತುಂಬ ಸ್ವಾರಸ್ಯವಾಗಿರುತ್ತವೆ. ಬಲಿಪಾಡ್ಯಮಿ ದಿವಸ ನಮ್ಮ ನೆರೆಮನೆಯಾಕೆ ಸೀರಿಯಲ್ ಸುಬ್ಬಮ್ಮನವರು ಹಠಾತ್ತನೆ ಕಾಫಿ ಬಟ್ಟಲು ಸಮೇತ ನಮ್ಮನೆಗೆ ನುಗ್ಗಿ ಯಾವುದೋ ಧಾರಾವಾಹಿಯನ್ನು ಹೊಗಳುತ್ತ ಹೊಸಲು ಮೇಲೆ ನಿಂತುಕೊಂಡೇ ಬಿಟ್ಟರು. ಯಾಕೆ ಬಂದರೋ ತಿಳಿಯದೆ ನಾನು ತಬ್ಬಿಬ್ಬಾಗಿ 'ಇವತ್ತು ಕ್ರಿಕೆಟ್ ಮ್ಯಾಚಿದೆ, ಧಾರಾವಾಹಿ ಬರುತ್ತಿಲ್ಲ' ಎಂದೆ. 'ನಿನ್ನ ಕೊಂಕುಮಾತು ನನಗೆ ಗೊತ್ತಿಲ್ಲವೆ' ಎನ್ನುತ್ತ ನನ್ನನ್ನು ಒಂದು ಯಃಕಶ್ಚಿತ್ ಪ್ರಾಣಿಯಂತೆ ನೋಡಿ ನನ್ನ ಹೆಂಡತಿ ಈಚೆಗೆ ಬಂದ ತಕ್ಷಣ ''ಲೇ ಮೀನಾಕ್ಷಿ, ಶಾಸ್ತ್ರಿಗಳು ತೀರ್ಥ ಯಾತ್ರೆ ಮುಗಿಸಿಕೊಂಡು ಬಂದರೇನೆ? ಶ್ರೀ ಲಕ್ಷ್ಮಿ ಮದುವೆ ಯಾವಾಗಲೆ'' ಎಂದರು. ನನಗೆ ಏನೂ ಅರ್ಥ ವಾಗಲಿಲ್ಲ! ಶಾಸ್ತ್ರಿಗಳು ಯಾರು? ಅವರು ಈ ಹೊತ್ತಿನಲ್ಲಿ ಇಲ್ಲಿಗೇಕೆ ಬರ್ತಾರೆ? ಅಂತ ಪೆಚ್ಚು ಪೆಚ್ಚಾಗಿ ನಾನು ಆಕೆಯನ್ನು ಕೇಳಿದೆ. ''ನಿಮ್ಮಂಥ ಅನಾಗರೀಕರಿಗೆ, ಒರಟು ಮನುಷ್ಯರಿಗೆ ಅದೆಲ್ಲ ಗೊತ್ತಾಗುಲ್ಲ. ನ್ಯೂಸು, ನ್ಯೂಸು ಅಂತ ಸದಾ ಚಡಪಡಿಸ್ತಾ ಇರ್ತೀರ. ಸೀರಿಯಲ್ಲುಗಳನ್ನು ತಾತ್ಸಾರ ಮಾಡಿದರೆ ಹೀಗೇ ಆಗೋದು'' ಎಂದಳು. ಮನೇಲಿ ಟಿವಿ ಇಟ್ಕೊಂಡು ನ್ಯೂಸಿಗೆ ಅಲೆದಾಡೋ ಸ್ಥಿತಿ ನನಗೆ ಯಾವತ್ತೋ ಪ್ರಾಪ್ತವಾಗಿದೆ. ಮೂವತ್ತು ಮೂರು ಪರ್ಸೆಂಟ್ ಬರೋಕ್ಮುಂಚೇನೆ ಹೀಗೆ? ಆಮೇಲೆ ಹೇಗೋ?

'ಮನೆಹಾಳರು' ಒಂದು ಪೊಲಿಟಿಕಲ್ ಸೀರಿಯಲ್! ರಾಜಕಾರಣಿಗಳನ್ನು ಅಷ್ಟೊಂದು ಹೀಯಾಳಿಸಿ. ದೇಶದ ಕಷ್ಟನಷ್ಟಗಳಿಗೆ (ಸೈಕ್ಲೋನು ಸೇರಿ) ಅವರೇ ಕಾರಣ ಎಂದು ಅರ್ಥ ಬರುವ ಡೈಲಾಗನ್ನು ಒಬ್ಬ ಮಿಲಿಟರಿ ಸಿಪಾಯಿ ಬಾಯಿಂದ ಹೇಳಿಸಬಾರದಾಗಿತ್ತು ಎಂದು ಅದರ ೪೨೦ನೆಯ ಎಪಿಸೋಡನ್ನು ನೋಡುವಾಗ ಮಾಜಿಮಂತ್ರಿಯೊಬ್ಬರ ಪತ್ನಿ ಒಂದು ದಿವಸ ತೀವ್ರವಾದ ಆಕ್ಷೇಪಣೆ ಎತ್ತಿದರು! ''ಒಬ್ಬ ಮಿಲಿಟರಿ ಸಿಪಾಯಿ ಹೇಳಿಕೆಯನ್ನೇ ಆಧಾರವಾಗಿಟ್ಟುಕೊಂಡು ಮಂತ್ರಿಯನ್ನು ಅರೆಸ್ಟ್ ಮಾಡುವ ಸೀನನ್ನೂ ಕಥೆಯಲ್ಲಿ ಸೇರಿಸಿರುವುದು ಶುದ್ಧ ಕುತಂತ್ರ. ದ್ವೇಷ ಸಾಧನೆಯ ಪ್ರಯತ್ನ ನೆರೆ ರಾಷ್ಟ್ರದಲ್ಲಿ ಏನಾಯಿತು ಎಂಬುದು ನಿಮಗೆ ಗೊತ್ತಿಲ್ಲವೆ. ಏನೋ ಸಂಚು ಮಾಡುತ್ತಿರುವಂತಿದೆ. ರಕ್ಷಣಾ ಸಚಿವರಿಗೆ ವಿವರವಾಗಿ ಬರೆದು ತಿಳಿಸುತ್ತೇನೆ'' ಎಂದು ಆಕೆ ಡೈರೆಕ್ಟರಿಗೆ ಖಾರವಾಗಿ ಕಾಗದ ಬರೆದರು! ಡೈರೆಕ್ಟರಿಗೆ ನಡುಕ ಹುಟ್ಟಿತು, ಸೀರಿಯಲ್ ಎಲ್ಲಿ ನಿಂತು ಹೋಗುತ್ತೋ ಅಂತ! ಆದಕ್ಕೆ ಅವರು ಒಂದು ಪ್ರತ್ಯುತ್ತರ ಬರೆದು'' ಮೇಡಂ, ನೀವು ಗಾಬರಿ ಪಡುವಂಥಾದ್ದು ಏನೂ ಆಗಿಲ್ಲ. ನೆರೆ ರಾಷ್ಟ್ರದಲ್ಲಿ ಆದಂತೆ ನಮ್ಮ ದೇಶದಲ್ಲಿ ಆಗುವುದು ಅಸಾಧ್ಯ ಈ ಯುಗದಲ್ಲಿ! ಆದರೆ ನಿಮ್ಮ ಚಿಂತೆ ಏನು ಎಂಬುದು ನಮಗೆ ಅರ್ಥವಾಗಿದೆ. ಮುಂದಿನ ಎಪಿಸೋಡಿನಲ್ಲಿ ಆ ತಪ್ಪನ್ನು ಸರಿಪಡಿಸುತ್ತೇವೆ. ಸಚಿವರಿಗೆ ತಕ್ಷಣ ಬೈಲ್ ಕೊಡಿಸಿ ಬಿಡುಗಡೆ ಮಾಡಿಸುವುದಲ್ಲದೆ, ಚಾರ್ಜ್‌ಷೀಟನ್ನೂ ಹಿಂದಕ್ಕೆ ತೆಗಿಸುತ್ತೇವೆ. ಅಲ್ಲದೆ ಚುನಾವಣೆಗೆ ಅವರನ್ನೇ ಕ್ಯಾಂಡಿಡೇಟಾಗಿ ಆರಿಸಿ ಗೆಲ್ಲಿಸುತ್ತೇವೆ. ಚಿಂತೆ ಬಿಟ್ಟು ನಿಮ್ಮ ದೇಶೋದ್ಧಾರ ಕಾರ್ಯಕ್ರಮಗಳನ್ನು ಮುಂದುವರಿಸಿಕೊಂಡು ಹೋಗಿ'' ಎಂದು ಭರವಸೆ ಕೊಟ್ಟರು. ಮೇಡಂಗೆ ವೀಕ್ಷಕ ಸಂಶೋಧನಾ ಕೇಂದ್ರದವರು ಡಿಡಿ ಗೋಪುರದ ಕೆಳಗೆ ಸನ್ಮಾನ ಮಾಡಿದರು.

'ಅತ್ತೆ-ಸೊಸೆ' ಸೀರಿಯಲ್ ಕಿರು ತೆರೆ ಮೇಲೆ ಕಾಣಿಸಿಕೊಂಡಮೇಲೆ ನಮ್ಮ ಬೀದಿಯಲ್ಲಿ ಹೊಸ ಉತ್ಸಾಹ ಚಿಮ್ಮಿದರೂ ಮನೆಗಳಲ್ಲಿ ಒಂದು ತರಹ ಸಂಶಯಾತ್ಮಕವಾದ ವಾತಾವರಣ ಏರ್ಪಟ್ಟಿತು!

''ಇಲ್ಲಿ ನೋಡ್ರಿ, ಸೊಸೆ ಕಾಫೀಲಿ ವಿಷ ಬೆರಸಿ ಅತ್ತೆಗೆ ಕಾಫಿ ಬಟ್ಲನ್ನ ಕೊಡ್ತಿದಾಳೆ! ಎಷ್ಟು ಚೆನ್ನಾಗಿದೆ ಪ್ಲಾಟು'' ಅಂತ ಒಂದು ಮಧ್ಯಾಹ್ನ ೭ನೇ ನಂಬರು ಫ್ಲಾಟಿನಲ್ಲಿ ಚಿಕ್ಕ ವಯಸ್ಸಿನ ಸೊಸೆಯೊಬ್ಬಳು ಗಹಗಹಿಸಿ ನಗುತ್ತ ಕೂಗಿಕೊಂಡಳು. ಇದಕ್ಕೆ ಪ್ರತಿಭಟನೆ ಮೂರನೆಯ ಮಹಡಿ ಗವಾಕ್ಷಿಯಿಂದ ಹೊರಬಂತು. ''ಹೀಗೆಲ್ಲಾದ್ರೂ ಉಂಟೆ, ಸೊಸೆ ಅತ್ತೇಗೆ ವಿಷ ಕೊಡೋದು. ಅದು ನಮ್ಮ ಹಕ್ಕು! ಮುಲಾಜಿಲ್ಲದೆ ಅದನ್ನು ರಿವರ್ಸ್ ಮಾಡಿ ಕ್ಷಮಾಪಣೆ ಕೇಳಿ'' ಅಂತ ಹುಬ್ಳಿಕಡೆ ಅತ್ತೆ ತಕ್ಷಣ ನಿರ್ಮಾಪಕರಿಗೆ ಫೋನ್ ಮಾಡಿ ವೀಕ್ಷಕರ ಸಂಶೋಧನ ವಿಭಾಗಕ್ಕೂ

ಸುದ್ದಿಯನ್ನು ಮುಟ್ಟಿಸಿದರು. ಸೀರಿಯಲ್ ನಿರ್ಮಾಪಕರು ಒಂದು ಪತ್ರಿಕಾ ಗೋಷ್ಠಿಯನ್ನು ಕರೆದು ಅವರ ಟೀಮಿನ ಪ್ಲಾನ್ ಏನೆಂಬುದನ್ನು ಪ್ರಕಟಿಸಿದರು. ಮೊಳಕಾಲ್ಮೂರಿಂದಲೂ ಮೂರು ಜನ ಅತ್ತೆಯರು ಫೋನಾಮಾನಸವಾಗಿ ಬೈದು ಡೈರೆಕ್ಟರಿಗೆ ಮಂಗಳಾರತಿ ಎತ್ತಿದ್ದರಂತೆ! ಡೈರೆಕ್ಟರು ಹೋಟಲ್‌ಸೋಕದಲ್ಲಿ ಒಂದು ಟೀಪಾರ್ಟಿ ಮಾಡಿ ಸಮಜಾಯಿಷಿ ನೀಡುತ್ತ ''ಇವರ್‍ಯಾರೂ ಸೀರಿಯಲ್ಲಿನ ೪೧೨ನೆಯ ಕಂತನ್ನು ನೋಡೇ ಇಲ್ಲ. 'ಲಿಂಕ್' ಮಿಸ್ ಆಗಿರುವುದು ದುರದೃಷ್ಟಕರ. ವಿಷ ಬೆರೆಸಿದ ಕಾಫಿಯನ್ನು ಅತ್ತೆ ಇನ್ನೇನು ಬಾಯಿಗೆ ಸುರುಕೊಳ್ಳಬೇಕು ಎನ್ನುವಷ್ಟರಲ್ಲಿ ಒಂದು ಕರಿ ಬೆಕ್ಕು ಬಂದು ಕಾಫಿ ಬಟ್ಟಲನ್ನು ಉರುಳಿಸಿ ತಾನೂ ನೆಕ್ಕದೆ ಹೊರಟುಹೋಗುತ್ತೆ. ಇದು ಕಥೆಯ ಬಹು ಮುಖ್ಯವಾದ ಭಾಗ. ಬೆಕ್ಕಿನ ನಾಲಿಗೆಯಿಂದ ವಿಷದ ಕಾಫಿಯನ್ನು ನೆಕ್ಕಿಸುವುದು, ಬೆಕ್ಕು ವಿಲವಿಲನೆ ಒದ್ದಾಡಿ ಸಾಯುವುದು ಮುಂತಾದ ದೃಶ್ಯಗಳನ್ನು ತಾನು ತೆಗೆಯುವುದಿಲ್ಲವೆಂದೂ, ಬೆಕ್ಕನ್ನು ಸಾಯಿಸುವುದು ತುಂಬಾ ಪಾಪವೆಂದೂ ನಮ್ಮ ಕ್ಯಾಮರ ಮ್ಯಾನ್ ಹಠಹಿಡಿದಿದ್ದರಿಂದ ಬೆಕ್ಕು ವಿಷವನ್ನು ನೆಕ್ಕಿ ಸಾಯುವ ದೃಶ್ಯಗಳ ಚಿತ್ರೀಕಣದ ಗೋಜಿಗೆ ನಾವು ಹೋಗಲಿಲ್ಲ! ಹೀಗಾಗಿ ಅದು ಗೋಪ್ಯವಾಗಿ ಉಳಿದು ಹೋಯಿತು! ಇದೇ - ಸೀರಿಯಲ್ಲಿನ ಬಹುಮುಖ್ಯವಾದ ಸಸ್ಪನ್ಸ್‌ಸೀನು! ಈಗ ಕಥೆ ೩೬೬ನೇ ಭಾಗ ತಲುಪಿದೆ. ಇಷ್ಟು ಬೇಗ ಅತ್ತೇಗೆ ವಿಷ ಕುಡಿಸಿ ಸಾಯಿಸೋಕೆ ನಾವೇನು ಪೆದ್ದರೆ. ಇನ್ನೂ ಸೊಸೆಗೆ ಎಷ್ಟೊಂದು ಹಿಂಸೆ, ಕಿರುಕುಳ ಕೊಡಬೇಕಾಗಿದೆ. ಮುಂದಿನ ಭಾಗದಿಂದ ಕಥೆ ಹೊಸ ತಿರುವು ಪಡೆಯುತ್ತದೆ. ಅತ್ತೆ ಸಾಯೋದು ೮೭೪ನೇ ಎಪಿಸೋಡಿನಲ್ಲಿ! ಈಗಲೇ ಸಾಯಿಸಿ ನನ್ನ ಸೀರಿಯಲ್ಲಿಗೆ ನಾನೇ ಮಣ್ಣು ಹಾಕಿಕೊಳ್ಳಲೆ? ಅತ್ತೆಗೊಂದು ಕಾಲ ಸೊಸೆಗೊಂದು ಕಾಲ ಎನ್ನುವುದನ್ನು ಕೇಳಿಲ್ಲವೆ?'' ಅಂತ ವಿವರಣೆ ಕೊಟ್ಟು ಎಲ್ಲರಿಗೂ ಸಮಾಧಾನ ಹೇಳಿ ಒಂದು ದೀರ್ಘವಾದ ಪ್ರೆಸ್ ಸ್ಟೇಟ್‌ಮೆಂಟ್ ಹೊರಡಿಸಿಯೇಬಿಟ್ಟರು. ಸೊಸೆಯಂದಿರೂ ಏನು ಮಾಡುವುದಕ್ಕೂ ತೋಚದೆ ಕಾಯುತ್ತ ಕುಳಿತುಕೊಂಡಿದ್ದಾರೆ! "Involvement" ಎಂದ್ರೆ ಇದು!

ಕಣ್ಣಲ್ಲಿ ಕಣ್ಣಿಟ್ಟು ಏಕಾಗ್ರ ಚಿತ್ರದಿಂದ ಸೀರಿಯಲ್‌ಗಳ ಕೊನೆ ಮೊದಲಿಲ್ಲದ ಕಥಾ ಭಾಗಗಳನ್ನು ನೋಡುವ ಇನ್ನೂ ಕೆಲವು ವೀಕ್ಷಕರು, ಕರೆಂಟ್ ಕೈಕೊಟ್ಟಿದ್ದರಿಂದ ಒಂದು ಎಪಿಸೋಡ್ ಮಿಸ್ ಆದರೆ, ಮಾರನೆ ದಿವಸವೇ ಬೇರೆ ಬಡಾವಣೆಗಳಲ್ಲಿ (K.E.B. ಬಡಾವಣೆ ತುಂಬ ಸೂಕ್ತ!) ವಾಸ ಮಾಡುವ ಅವರ ನೆಂಟರಿಷ್ಟರಿಗೋ, ಸ್ನೇಹಿತರಿಗೋ ಫೋನ್ ಮಾಡಿ ಕಳೆದುಹೋದ ಕಂತಿನ ಕಥೆಯನ್ನು ತಿಳಿದುಕೊಳ್ಳುತ್ತಾರೆ. ''ಆ ಸತ್ತುಹೋದ ಹೆಂಡತಿ ಯಾರದೋ ಮನೇಗೆ ಹೋಗಿ ನೀನೇ ನನ್ನ ಗಂಡ ಅಂತ ಪೀಡಿಸ್ತಾಳಲ್ಲ, ಆಮೇಲೆ ಏನಾಯ್ತು

ಮುಂದಕ್ಕೆ'' ಅಂತ ಕಾಲೇಜ್ ಕನ್ಯೆಯೊಬ್ಬಳು ನಮ್ಮ ಮನೆಗೆ ಫೋನ್ ಮಾಡಿದ್ದಳು. ''ಅಯ್ಯೋ ಸತ್ತಮೇಲೂ ಅವಳು ಅವನ್ನೇ ಗಂಡ ಅಂತ ಚೆನ್ನಾಗಿ ಕಾಡ್ತಾಳೆ ಕಣೆ, ಸಿಂಪ್ಲಿ ಫೆಂಟಾಸ್ಟಿಕ್! ತುಂಬ ನೇಚುರಲ್ಲು! ಅವನೇ ನಿಜವಾದ ಗಂಡ, ಏಕೆಂದರೆ ಶುದ್ಧ ಪೆದ್ದ! ಹೇಗೂ ಪೀಡಿಸ್ತಿದಾಳಲ್ಲ, ಹಿಂದಿನ ಜನ್ಮದಲ್ಲಿ (ಎಪಿಸೋಡಿನಲ್ಲಿ)ದ್ದುದಕ್ಕಿಂತ ಈಗ ಚೆನ್ನಾಗೇ ಕಾಣಿಸ್ತಾಳಲ್ಲ. ಹಾಗಾಗಿ ಅವಳ ಜೊತೇಲೇ ಸಂಸಾರ ಮಾಡಿಕೊಂಡಿರೋದು ಬಿಟ್ಟು ಪೋಲೀಸು, ಕೋರ್ಟು, ಜೈಲು ಅಂತ "Knock-out" ಜಾಹಿರಾತು ಬರೋತನ್ಕ ಹಾರಾಡಿದ; ಶುದ್ಧ ಕೋತಿ'' ಎಂದು ಮುಗಿಸುವ ಹೊತ್ತಿಗೆ ಟ್ರಿಣ್, ಟ್ರಿಣ್ ಕಟ್ಟಾಯ್ತು!

ಇತ್ತೀಚೆಗೆ ಒಂದು ರೀತಿಯ ಹೊಸ ಜಂಬ ತೋರಿಸುತ್ತಿದಾರೆ ಕೆಲವು ಆಸ್ತಿಪಾಸ್ತಿ ಇರುವ ಮಹಿಳೆಯರು. ತಮ್ಮ ಬಂಗಲೆ ಮನೆಗಳಲ್ಲಿ ಸೀರಿಯಲ್ ಷೂಟಿಂಗಿಗೆ ಅಣಿಮಾಡಿಕೊಡುವುದು ಸುಂದರವಾದ ತಮ್ಮ ಮನೆ ದೃಶ್ಯಗಳು ಕಿರು ತೆರೆಮೇಲೆ ಮೂಡಿ ಬರುವುದನ್ನು ನೆಂಟರಿಷ್ಟರಿಗೆ ತೋರಿಸಿ ಬೀಗುವುದು! ಮೊನ್ನೆ 'ಮಾಯಾಂಗಿನಿ' ಸೀರಿಯಲ್ಲಿನ ೩೧೫ನೇ ಕಥಾ ಭಾಗಕ್ಕೆ ಕೆಲವು ದೃಶ್ಯಗಳನ್ನು ನಿಮ್ಮ ಮನೆಯಲ್ಲಿ ತೆಗೆಯುತ್ತೇವೆ ಅಂತ ಹೇಳಿ ಡೈರೆಕ್ಟರ್ ಕೋದಂಡು ಅಂಬುಜಾಕ್ಷಿಯವರ ಮನೇಗೆ ಬಂದರು, ಪರ್ಮಿಷನ್ ಕೇಳೋಕೆ. ಮನೆಯೊಡತಿಗೆ ಆಕಾಶ ಕೈಗೆ ಎಟಕಿದಷ್ಟು ಸಂತೋಷವಾಯ್ತು. ಷೂಟಿಂಗಿಗೆ ಲಗ್ನ, ಮುಹೂರ್ತ ಎಲ್ಲಾ ನಿಷ್ಕರ್ಷೆ ಆಯಿತು. ಬಾಲ್ಕನಿ, ಡ್ರಾಯಿಂಗ್ ರೂಮು, ಸಿಟೌಟ್‌ಗಳಿಗೆಲ್ಲ ಅಚ್ಚುಕಟ್ಟಾಗಿ ಸುಣ್ಣ ಬಣ್ಣ ಮಾಡಿ, ಕಿಟಕಿಗಳಿಗೆ ರಂಗು ರಂಗಿನ ಪರದೆಗಳನ್ನು ನೇತುಹಾಕಿ, ಹೂ ಕುಂಡಗಳಿಗೆ ಗೊಂಚಲು ದೀಪಗಳನ್ನು ಜೋಡಿಸಿ ಅಂಬುಜಾಕ್ಷಿಯವರು ಮನೆಯನ್ನು ಸಿಂಗರಿಸಿದರು. ಷೂಟಿಂಗೂ ಆಯ್ತು. 'ಮೂರ್ಖ' ಎಂಬ ಹೆಸರಿನ ಕಾದಂಬರಿ ಆಧಾರಿತ ಸೀರಿಯಲ್ಲು! ಸಂಬಂಧಪಟ್ಟ ಕಥಾಭಾಗ ಬರುವುದನ್ನೇ ಕಾಯುತ್ತಿದ್ದ ಅವರು ಅಕ್ಕಪಕ್ಕದ ಮನಗಳ ನಾರೀ ಮಣಿಗಳನ್ನೆಲ್ಲ ಒಂದು ಮಧ್ಯಾಹ್ನ ಕಲೆ ಹಾಕಿ ಕಾಫಿ ಕೊಟ್ಟು ದಡ್ಡ ಪೆಟ್ಟಿಗೆ ಮುಂದೆ ಕೂರಿಸಿದರು! ಎಪಿಸೋಡು ಮುಗಿಯುತ್ತ ಬಂದರೂ 'ಸೌಂದರ್ಯವಿಲ್ಲ'ದ ಕೈತೋಟವಾಗಲಿ, ಬಾಲ್ಕನಿಯಾಗಲಿ, ಮಿರುಮಿರುಗುವ ತೂಗು ದೀಪಗಳಾಗಲೀ ತೆರೆಯ ಮೇಲೆ ಮೂಡಲೇ ಇಲ್ಲ! ಹಾರ್ಲಿಕ್ಸ್ ಆಯಿತು, ಬಿಸ್ಕತ್ ಆಯಿತು! ಪೇಸ್ಟ್ ಆಯಿತು, ಸೋಪಾಯಿತು. ಬ್ಲೇಡಾಯಿತು, ಕೊ ಕೊ ಆಯಿತು, ಬಾಟಲುಗಳಾಯ್ತು! ವೀಕ್ಷಕರಿಗೆ ಬೆವರು ಕಿತ್ತುಕೊಂಡಿತು. ಎಲ್ಲ ಬಂತು ಹಾಳು ಫ್ಯಾನು ಬರಲೇ ಇಲ್ಲ ಅಂತ ಕೆಲವರು ಗೊಣಗಿದ್ದೂ ಉಂಟು! ಯಾವುದಕ್ಕೆ ಕಾದು ಕುಳಿತಿದ್ದರೋ ಅದರ ಸುಳಿವು ಕೂಡ ಕಾಣಿಸಲಿಲ್ಲ. 'ಬ್ರೇಕ್' ಆದಮೇಲೆ ಬಂದೇ ಬರುತ್ತೆ, ಸ್ವಲ್ಪ ತಾಳಿ ಅಂತ ಅಂಬುಜಾಕ್ಷಿ ಎಲ್ಲರಿಗೂ ಸಮಾಧಾನ

ಹೇಳುತ್ತಲೇ ಇದ್ದರು. ಕಡೇಲಿ ಒಂದು ದೃಶ್ಯವೇನೋ ಬಂತು - ಒಂದೇ ಒಂದು ಕ್ಷಣ! ತೆರೆಮೇಲೆ ಕಂಡಿದ್ದು '೮ನೇ ಮೈನ್, ೨೦ನೇ ಕ್ರಾಸು' ಎಂದು ಬರೆದಿದ್ದ ಕಾರ್ಪೊರೇಷನ್ ಬೋರ್ಡು ಅಂಬುಜಾಕ್ಷಿ ಮನೆ ಇರೋದು ಅದೇ ಬೀದಿಯಲ್ಲಿ. ಮುಂದೆ? ಸೀರಿಯಲ್ ಆಗಿ ಹುಡುಗ ಹುಡುಗಿಯರು ಎದುರುಗೊಳ್ಳುವ ಪ್ರೇಮ ಬರುತ್ತಿದ್ದಂತೆ ಬಂಗಲೆಯ ಹೊರ ಮತ್ತು ಒಳ ಭಾಗಗಳು ಕಂಗೊಳಿಸುತ್ತವೆ ಎಂದು ಅಂಬುಜಾಕ್ಷಿ ಲೆಕ್ಕಾಚಾರ ಹಾಕುತ್ತಿದ್ದಾಗ ಮನೆ ಹಿಂದೆ ಇದ್ದ ಎತ್ತರದ ಕಾಂಪೌಂಡ್ ಗೋಡೆ ಧುಮುಕಿ ಒಬ್ಬ ಕಳ್ಳ ಪಕ್ಕದಲ್ಲಿದ್ದ ಒಂದು ಬಾತ್‌ರೂಮಿಗೆ ಸೇರಿಕೊಂಡುಬಿಡುತ್ತಾನೆ (ಸೀರಿಯಲ್ ಕಥೆಯಲ್ಲಿ!) ಒಂದು ಎತ್ತರದ ಗೋಡೆ, ಬಾತ್‌ರೂಮು, ಬಾಗಿಲು ಇಷ್ಟೆ ಬಂಗಲೆ ದೃಶ್ಯ ತೆರೆಮೇಲೆ ಕಂಡಿದ್ದು! ಎಪಿಸೋಡು ಮುಗಿದು, ಇದರ ಪ್ರಾಯೋಜಕರು - ಕರಡಿ ಮುಲಾಮು ಕರಿ ಹಿಂಗು ಎಂದು ಹೊಡೆದುಕೊಂಡ ಮೇಲೆ ವೀಕ್ಷಕರು ಎದ್ದು ಶಾಂತವಾಗಿ ಅವರವರ ಮನೆಗೆ ಹೋದರು! 'ಟೀವೀಲಿ ಕಂಡ ಎತ್ತರದ ಗೋಡೇಲಿ ಅರ್ಧಭಾಗ ನಮ್ಮ ಮನೆಗೆ ಸೇರಿದ್ದು' ಅಂತ ಪಕ್ಕದ ಮನೆ ನಾಗಲಕ್ಷ್ಮಿ ಎಲ್ಲರಿಗೂ ಹೇಳಿಕೊಂಡು ಈಚೆಗೆ ಬಂದಾಗ ಅಂಬುಜಾಕ್ಷಿಗೆ ಸ್ವಲ್ಪ ಬೇಸರವೇ ಆಯಿತು. ''ಈ ಸಂಪತ್ತಿಗೆ ನಮ್ಮ ಮನೇನ ಯಾತಕ್ಕೆ ಆರಿಸಿಕೊಂಡಿರಿ ಷೂಟಿಂಗಿಗೆ'' ಅಂತ ಡೈರೆಕ್ಟರ್ ಕೋದಂಡುಗೆ ಫೋನ್ ಮಾಡಿ ತರಾಟೆಗೆ ತೆಗೆದುಕೊಂಡರು. ಅದಕ್ಕೆ ಡೈರೆಕ್ಟರು ''ಮೇಡಂ, ನಮ್ಮ ಕಥೆಗೆ ಲೊಕೇಷನ್ ಆರಿಸುವಾಗ ಎತ್ತರದ ಕಾಂಪೌಂಡ್ ಇರುವ ಮನೆಯೊಂದನ್ನು ಹುಡುಕಿ ಎಂದು ಕಥಾ ಲೇಖಕರು ಸೂಚನೆ ಕೊಟ್ಟಿದ್ದರು. ನಮ್ಮ ತಾಂತ್ರಿಕ ವರ್ಗ ನಿಮ್ಮ ಮನೆಯನ್ನು ನೋಡಿ O.K. ಮಾಡಿತು! ಇದರಲ್ಲಿ ಪಿತೂರಿ ಏನೂ ಇಲ್ಲ - ಚಿತ್ರೀಕರಣದ ಮಧ್ಯೆ ನಾನು 'ಕಟ್, ಕಟ್' ಎಂದಾಗ ಸ್ವಲ್ಪ ಎಡವಟ್ಟಾಗಿದೆ ಅಷ್ಟೆ! ಕ್ಷಮಿಸಿ'' ಅಂತ ಜವಾಬು ಕೊಟ್ಟು ಉಪಾಯವಾಗಿ ಹೊರಳಿಕೊಂಡರು. ಆದರೆ ಅಂಬುಜಾಕ್ಷಿ ಬಿಡಬೇಕಲ್ಲ ಡೈರೆಕ್ಟರನ್ನು ಭೇಟಿಮಾಡಿ ''ಕಥೆಯೇ ಹಾಗಿರುವಾಗ ನೀವೇನ್ ಮಾಡ್ತೀರಿ, ಹೇಗೂ ಮುಂದಿನ ಸೀರಿಯಲ್ಲಿಗೆ ಸಿದ್ಧತೆ ಮಾಡ್ಕೋತಾ ಇದೀರಲ್ಲ! ಈಗ ಎತ್ತರದ ಕಾಂಪೌಂಡ್ ಗೊಡೇನ ಕೆಡವಿಸಿ ನೆಲಸಮ ಮಾಡಿದಿನಿ! ಕಾಂಪೌಂಡಿಲ್ಲದ ಮನೆಯಲ್ಲಿ ಈ ಸಲ ಕಥೆ ನಡೆಯೋ ಹಾಗೆ ಮಾಡಿ. ನಿಮ್ಮ ಕಥಾ ಲೇಖಕರಿಗೆ ಈಗಲೇ ಸೂಚನೆ ಕೊಟ್ಟು ಯಾವುದೇ ತರಹ ಕಾಂಪೌಂಡೂ ಮನೆಗೆ ಇರಕೂಡದೆಂದು ಅಗ್ರಿಮೆಂಟಿನಲ್ಲಿ ಕಂಡೀಷನ್ ಹಾಕಿ! ಷೂಟಿಂಗಿಗೆ ನಮ್ಮ ಮನೆಗೇ ಬನ್ನಿ'' ಅಂತ ಆಹ್ವಾನ ಕೊಟ್ಟು ಬಂದರು! ಸೀರಿಯಲ್ ಬಂದಮೇಲೆ ಗೊತ್ತಾಗುತ್ತೆ ಕಥೆ ಹಳೇದೆ? ಹೊಸದೆ? ಅಂತ...!

# ಸಂದೇಶಗಳು

– ಬೇಲೂರು ರಾಮಮೂರ್ತಿ

ಇತ್ತೀಚೆಗೆ ಕಾರ್ಗಿಲ್ ಯುದ್ಧದಲ್ಲಿ ದೇಶಕ್ಕೆ ಅಪ್ರತಿಮ ಸೇವೆ ಸಲ್ಲಿಸಿದ ಯೋಧರಿಗೆ ದಿನಂಪ್ರತಿ ಅನೇಕ ಸಂದೇಶಗಳನ್ನು ಆಕಾಶವಾಣಿಯು ಬಿತ್ತರಗೊಳಿಸಿತು. ಈ ಸಂದೇಶಗಳು ಅವರ ಸಂಬಂಧಿಕರಿಂದ, ಸ್ನೇಹಿತರಿಂದ, ಹಿತೈಷಿಗಳಿಂದ ಹಾಗೂ ಸಾಮಾನ್ಯ ಪ್ರಜೆಗಳಿಂದ ಬಂದಂಥವು.

ಕೆಲವು ಸಂದೇಶಗಳು ಹೀಗೆ ಇದ್ದಿರಬಾರದೇಕೆ?

ಇದು ಆಕಾಶವಾಣಿ ಬೆಂಗಳೂರು - ಈಗ ಕಾರ್ಗಿಲ್‌ನಲ್ಲಿ ಹೋರಾಡುತ್ತಿರುವ ಯೋಧರ ಬೆಂಬಲಕ್ಕಾಗಿ ಸಂದೇಶಗಳು

(ಅ) ಹಲೋ... ನಾನು ತಿಮ್ಮಕ್ಕ ಮಾತಾಡೋದು. ನನ್ನ ಮೊಮ್ಮಗ ಯುದ್ಧಕ್ಕೆ ಹೋಗಿದಾನೆ - ಅವನಿಗೆ ಈ ಸಂದೇಶ.

ಮಗಾ.. ಬೇಗ ಯುದ್ಧ ಮುಗಿಸ್ಕೊಂಡ್ ಬಂದ್‌ಬಿಡು ನಾವೆಲ್ಲ ನಿಂಗೆ ಕಾಯ್ತದೀವಿ. ನೀ ಬರೋ ಹೊತ್ಗೆ ಹಸು ಕರ ಹಾಕಿರುತ್ತೆ. ಒಳ್ಳೆ ಕರಾವಿರುತ್ತೆ. ಬೆಣ್ಣೆ, ಮೊಸರು ತಿಂದು ಕಳ್ಕೊಂಡ್ ಶಕ್ತೀನ ಗಳಿಸ್ಕೊಬಹುದು. ನೀ ಬೇಗ ಬಾ... ಯಾಕೇಂದ್ರೆ ಎದುರು ಮನೆ ಶಂಕರ ನಿನ್ನ ಹೆಂಡ್ತಿ ಕಡೆ ಅವಾಗವಾಗ ನೋಡ್ತಿರ್ತಾನೆ. ಅವಳೂ ಈಗೀಗ ಅವನ ಹತ್ರ ಮಾತಾಡ್ಕೊಂಡು ಕಿಸ ಕಿಸಾಂತ ನಗ್ತಿರ್ತಾಳೆ. ಇಲ್ಲಿ ಯುದ್ಧ ಪ್ರಾರಂಭ ಆಗೋ ಮುಂಚೆ ಅಲ್ಲಿ ಯುದ್ಧ ಮುಗಿಸಿಕೊಂಡು ಬಾ...

(ಆ) ನಾನು ಸುಮಿತ್ರ ಅಂತ ಮಾತಾಡೋದು. ನಮ್ಮ ಯಜಮಾನರು ಈಗ ಕಾರ್ಗಿಲ್ ಯುದ್ಧದಲ್ಲಿದಾರೆ ಅವರಿಗೆ ಈ ಸಂದೇಶ.

ರೀ... ನೀವು ಅದ್ಹೇಗೆ ಬಂದೂಕು ಹಿಡ್ಕೊಂಡು ಯುದ್ಧ ಮಾಡ್ತೀರಾಂತನೇ ಅರ್ಥ ಆಗಲ್ಲರೀ.. ಯಾಕೇಂದ್ರೆ ನಮ್ಮನ್ಲಿ ಒಂದು ಹಲ್ಲಿ, ಜಿರಲೆ, ಇಲಿ ಎಲ್ಲ ಹೊಡೀತಾ ಇದ್ದದ್ದು ನಾನೇ ಅಲ್ವೇನ್ರೀ... ದಿನಾ ಎಲ್ಲಾ ಚಾನಲ್‌ನೂ ನೊಡ್ತೀನಿ... ಸೈನಿಕರನ್ನೂ ನೋಡ್ತೀನಿ ನೀವು ಗುರುತೇ ಸಿಕ್ತಿಲ್ವಲ್ರಿ... ಎಲ್ರೂ ಒಂದೇ ತರ ಕಾಣಿಸ್ತಾರಪ್ಪ... ಹುಷಾರು ಕಣ್ರೀ... ಯಾವಾಗ್ಲೂ ಯಾರ ಹಿಂದೇನಾದ್ರೂ ಇರಿ... ಎದೆ ತೋರಿಸ್ಕೊಂಡು ಮುಂದೆ ಹೋಗಬೇಡಿ... ಇನ್ನೊಂದ್ ವಿಚಾರ ನಿಮ್ಮ ತಾಯಿ ಈ ಮನೇಲಿ ಬೆಳಗಿಂದ ಸಂಜೆವರೆಗೂ ಮಡಿ... ಮಡಿ... ಅಂತ ಹಾರಾಡೋದು ನಿಮಗೇ ಗೊತ್ತಿದೆ. ಹಾಗಂತ ನೀವೆಲ್ಲಾದರೂ ಯುದ್ಧದಲ್ಲಿ ಮಡಿದುಬಿಟ್ಟೀರ. ಬೇಗ ಬಂದ್‌ಬಿಡಿ... ನಿಮ್ಮಮ್ಮ ಹೇಳಿದ ಹಾಗೆ ಇಲ್ಲೇ ಮಡಿ ಮಾಡಬಹುದು.

(ಇ) ರೀ... ನಾನು ಶಾಲಿನಿ ಮಾತಾಡ್ತೋದೂರೀ... ನನ್ನ ವಾಯ್ಸ್ ನಿಮಗೆ ಕೇಳಿಸ್ತಿದ್ಯಾರೀ... ಮೊನ್ನೆ ರಕ್ಷಣಾ ಮಂತ್ರಿಗಳು ಯುದ್ಧದಲ್ಲಿ ದುಡಿಯೋ ಯೋಧರ ಕುಟುಂಬಗಳಿಗೆ ಎಷ್ಟೆಷ್ಟು ಪರಿಹಾರ ಕೊಡ್ತಾರೆ ಅಂತ ಘೋಷಿಸಿದ ಮೇಲೆ ನಮಗೆಲ್ಲ ಎಷ್ಟು ಸಂತೋಷ ಆಯ್ತು ಗೊತ್ತಾರೀ... ಆದರೆ ಆ ಭಾಗ್ಯ ನಮಗೆಲ್ಲಿ ಬರಬೇಕು... ಯಾರ್ಯಾರಿಗೆ ಅದೃಷ್ಟ ಕಾದಿದೆಯೋ... ದೇವರು ಸುಖ ಕೊಡಬೇಕಾದರೆ ಹೊಟ್ಟೆ ಮೇಲೆ ಹೊಡೆದು, ತಲೆ ಮೇಲೆ ಹೊಡೆದು ಇನ್ನೂ ಹೇಗ್ಹೇಗೋ ಹೊಡೆದು ಕೊಡ್ತಾನೆ ಅಂತಾರೆ... ನಮಗ್ಯಾವುದರ ಮೇಲೆ ಹೊಡೆದು ಕೊಡ್ತಾನೋ... ನೀವೇನೂ ಯೋಚನೆ ಮಾಡ್ಬೇಡ್ರಿ ಧೈರ್ಯವಾಗಿ ಯುದ್ಧಮಾಡಿ... ಶತ್ರುವಿನ ಮುಂದೆ ಎದೆಸೆಟೆಸಿ ನಿಂತ್ಕೊಳಿ... ಅವನು ಅದ್ಹೇಗೆ ಗುಂಡು ಹೊಡೀತಾನೋ ನಾವೂ ನೋಡ್ತೀವಿ. ಗುಂಡಿಗೆ ಹೆದರೋ ಗುಂಡಿಗೆ ನಿಮ್ದಲ್ಲ ಅಂತ ಗೊತ್ತು ಆದರೆ ಶತ್ರುವಿನ ಗುಂಡು ನಿಮ್ಮ ಗುಂಡಿಗೆಗೇ ಹೆದರಿಬಿಟ್ಟೀತು. ಇಲ್ಲಿ ನಾವೆಲ್ಲ ನಮ್ಮ ಅದೃಷ್ಟನೇ ಕಾಯ್ತಿದೀವಿ.

(ಈ) ವೀರ ಯೋಧರೇ... ನಿಮಗೆ ಶುಭವಾಗಲಿ... ನಾನೊಬ್ಬ ಸಾಮಾನ್ಯ ಪ್ರಜೆ ಮಾತಾಡ್ತಿದೀವಿ. ಲೈನ್ ಆಫ್ ಕಂಟ್ರೋಲ್ ದಾಟಿ ಬಂದಿರುವ ಶತ್ರುಗಳ ವಿರುದ್ಧ ಹೋರಾಡುತ್ತಿರುವ ನಿಮ್ಮ ಧೈರ್ಯ ಮೆಚ್ಚಬೇಕು. ಆದರೆ ಈ ಧೈರ್ಯ ಭಾರತದ ಎಲ್ಲಾ ಪ್ರಜೆಗಳಿಗೂ ಇದ್ದರೆ ದೇಶ ಇನ್ನು ಅಭಿವೃದ್ಧಿ ಹೊಂದುತ್ತೆ. ನಿಮಗಿರುವ ಧೈರ್ಯದಲ್ಲಿ ಒಂದು ಕಾಲು ಭಾಗವನ್ನಾದರೂ ಈ ಕಡೆ ಪಾಸ್ ಆನ್ ಮಾಡಿ ಯಾಕೇಂದ್ರೆ ದಿನ ಬೆಳಗಾದ್ರೆ ಬೆಲೆ ಹೆಚ್ಚಳ, ತೆರಿಗೆ, ಸುಂಕ ಅಂತ ಹೇಳಿ ನಮ್ಮ ನೆಮ್ಮದಿಯ ಲೈನ್ ಆಫ್ ಕಂಟ್ರೋಲ್‌ನ ದಾಟಿ ಬರ್ತಾ ಇರೋ ಬ್ರಷ್ಟ ರಾಜಕಾರಿಣಿಗಳೊಂದಿಗೂ ಅಧಿಕಾರಿಗಳೊಂದಿಗೂ ಹೋರಾಡಬೇಕಾಗಿದೆ. ಹಾಗೆ ನೋಡಿದರೆ ನಮಗೆ ಲೈನೂ ಇಲ್ಲ ಕಂಟ್ರೋಲೂ ಇಲ್ಲ. ಎಲ್ಲ ಓಟ್ ಆಫ್ ಕಂಟ್ರೋಲ್

(ಉ) ವೀರ ಯೋಧರೇ... ಈ ಸಂದೇಶ ಒಬ್ಬ ಗೃಹಸ್ಥನಿಂದ ಬರ್ತಾ ಇದೆ. ನಿಮ್ಮನ್ನು ನೋಡಿ ನನಗೆ ಅನುಕಂಪಕ್ಕಿಂತ ಹೊಟ್ಟೆಕಿಚ್ಚು ಹೆಚ್ಚಾಗಿದೆ... ಎಷ್ಟು ಆರಾಮವಾಗಿದೀರ... ಏನು ಕಥೆ. ಬೆಳಗಿಂದ ಸಂಜೆವರೆಗೂ ಒಂದಲ್ಲ ಒಂದು ಕಾಟ ಕೊಡೋ ಹೆಂಡ್ತಿಯಿಂದ ತಪ್ಪಿಸ್ಕೊಂಡಿದೀರ... ಇಂಥ ಭಾಗ್ಯ ಎಷ್ಟು ಜನಕ್ಕೆ ಸಿಗುತ್ತೆ. ನಾನಂತೂ ಹೆಂಡ್ತಿ ಕೈಲಿ ಸಿಕ್ಕಿ ಒದ್ದಾಡಿ ಹೋಗ್ತಿದೀನಿ.... ಆದರೆ ಕೆಲವು ಗಂಡಸರಾದರೂ ಸುಖವಾಗಿದಾರಲ್ಲ ಅನ್ನೋ ವಿಶಾಲ ಮನೋಭಾವ ನನ್ದು. ಈ ಯುದ್ಧ ನಿರಂತರವಾಗಿ ಸಾಗಲಿ... ನಿಮ್ಮ ನೆಮ್ಮದಿಯೂ ಹೀಗೇ ನಿರಂತರವಾಗಿರಲಿ... ಇಲ್ಲಿ ನಮ್ಮ ಹಣೆ ಬರಹವನ್ನಂತೂ ಬದಲಾಯಿಸೋಕಾಗಲ್ಲ. ಕೆಲವು ಭಾರತೀಯ ಗಂಡಸರಿಗಾದರೂ ನೆಮ್ಮದಿಯ ದಿನಗಳನ್ನು ಕರುಣಿಸಿದ ಶತ್ರುದೇಶಕ್ಕೆ ಮತ್ತೊಮ್ಮೆ ಜೈ.

(ಊ) ಹಾಯ್... ಈ ಮೆಸೇಜು... ಗಾಯಿತ್ರಿಯಿಂದ... ಪ್ರಿಯತಮ ಶಂಕರನಿಗೆ... ಹೇಗಿದೀರಾ... ಸಾರಿ... ಮೊದಲು ಇದೀರಾ ಅಂತ ಕೇಳಬೇಕು ಅಲ್ವ... ಇದ್ರೆ ತಾನೇ ಹೇಗಿರ್ತೀರ ಅನ್ನೋದು. ಇರ್ತೀರ ಬಿಡಿ... ಯಾಕೇಂದ್ರೆ ನಿಮ್ಮನ್ನ ನೋಡಿದಾಗಲೆಲ್ಲ ನಮ್ಮಿಬ್ಬರ ಮದುವೆಗೆ ಇಷ್ಟಪಡದ ನಮ್ಮಪ್ಪ ''ಪಾಪಿ ಚಿರಾಯು'' ಅಂತಿದ್ರಲ್ಲ. ಈ ಕಡೆ ಏನಾಗಿದೆ ಗೊತ್ತಾ. ನೀವು ಆ ಕಡೆ ಯುದ್ಧಕ್ಕೆ ಹೋಗಿದ್ದೇ ತಡ ಆ ನಾಗೇಶ ಮತ್ತೆ ನನ್ ಹಿಂದೆ ಬರೋಕೆ ಷುರು ಮಾಡಿದಾನೆ. ಗುಂಡ್ ತಿಂದು ಸಾಯೋಕ್ ಹೊರಟಿರೋನ ಯೋಚನೆ ಬಿಡು ನಾವು ಗುಂಡ್ ಹಾಕ್ಕೊಂಡ್ ಆರಾಮವಾಗಿರೋಣ ಅಂತಾನೆ. ರೀ... ನೀವು ಯುದ್ಧದಲ್ಲಿ ಸಾಯ್ತೀರ... ನಾನು ಅವನವಳು ಅಂತ ಎಷ್ಟ್ ಖುಷಿಯಾಗಿದಾನೇಂತ. ದೇವಸ್ಥಾನದಲ್ಲಿ ಅಭಿಷೇಕ ಕೂಡಾ ಮಾಡಿಸ್ದ ನೀವು ಸಾಯ್ಲಿ ಅಂತ ರೀ... ನನಗನ್ನಿಸ್ತಿದೆ ಮದುವೆ ಮಾಡ್ಕೊಂಡೇ ನಿಮ್ಮನ್ನ ಯುದ್ಧಕ್ಕೆ ಕಳಿಸಬೇಕಿತ್ತು... ಯಾಕೇಂತೀರಾ... ಸತ್ತೋರಿಗೆ ಕಾಂಪೆನ್‌ಸೇಷನ್ ಪ್ಯಾಕೇಜ್ ಎಷ್ಟು ಅಟ್ರಾಕ್ಟೀವ್ ಆಗಿದೇರೀ... ಒಂದ್ ವೇಳೆ ನೀವು ಸತ್ತು ಅಷ್ಟು ಕಾಂಪೆನ್‌ಸೇಷನ್ ನನಗೆ ಬಂದಿದ್ರೆ ನಾನು ಮತ್ತೆ ನಾಗೇಶನ್ನ ಮದುವೆ ಮಾಡ್ಕೊಂಡು ಏನು ಜುಮ್ಮಂತ ಇರಬಹುದಾಗಿತ್ತಲ್ವ... ಒಂದ್ ಕಲ್ಲಲ್ಲಿ ಎರಡು ಹಕ್ಕಿ ಹೊಡೆದ ಹಾಗಾಗಿರೋದು... ಎಲ್ಲಾ ದಿಕ್ಕೂ ಪಡ್ಕೊಂಡ್ ಬಂದಿರ್ಬೇಕು ಅಲ್ವಾ, ಬರೋದಾದ್ರೆ ಬೇಗ ಬನ್ನಿ... ಇಲ್ದಿದ್ರೆ ಇಲ್ಲಿ ನಾಗೇಶನ ಜೊತೆ ನೀವು ಯುದ್ಧ ಮಾಡಬೇಕಾಗುತ್ತೆ.

(ಋ) ಪ್ರೀತಿಯ ಅಣ್ಣ ಮಹದೇವ್‌ಗೆ ತಂಗಿ ನಳಿನಿಯ ಸಂದೇಶ. ಅಣ್ಣ... ಇಲ್ಲಿನ ಸಮಾಚಾರ ಏನು ಹೇಳ್ಲಿ. ಇಲ್ಲಿ ಎಲ್ಲರೂ ದಿನಾ ಏನಾದರೂ ಮೆಸೇಜ್ ಬರಬಹುದಾ ಅಂತ ಕಾಯ್ತಿದೀವಿ ಮೊನ್ನೆ ಏನಾಯ್ತು ಗೊತ್ತಾ. ನಮ್ಮ ಕ್ಲಾಸಲ್ಲಿ ಒಬ್ಬಳು ಹುಡುಗಿ ಇದಾಳೆ ಅವಳ ಹೆಸರು ಗೌರಿ ಅಂತ, ಅವಳ ಅಣ್ಣ ಯುದ್ಧದಲ್ಲಿ ಸತ್ತು ಹೋದ್ನಂತೆ. ಅದಿಕ್ಕೆ ಅಂತಹ ಧೀರ ಅಣ್ಣನ ಧೀರೆ ಅಂತ ಗೌರಿಗೇ ಸನ್ಮಾನ ಮಾಡಿದರು. ಎಲ್ಲರೂ ಹಣ ಕಲೆಕ್ಷನ್ ಮಾಡಿ ಕೊಟ್ರು. ಎಲ್ಲೆಲ್ಲಿಂದಲೋ ಹಣದ ಹೊಳೇನೇ ಹರಿದು ಬಂತು ಈಗ ಅವರು ಮೂರಂತಸ್ತಿನ ಮಹಡಿ ಮನೆಗೆ ಹೋಗಿದಾರೆ ಅದೃಷ್ಟ ಅಂದ್ರೆ ಹೀಗಿರಬೇಕು. ಮಳೆಗಾಲ ಬಂತು ಮನೆ ಹೆಂಚು ಕೈಯಾಡಿಸೋಕೆ ದುಡ್ಡಿಲ್ಲ ಅಂತ ಅಮ್ಮ ತುಂಬಾ ಪರದಾಡ್ತಿದಾಳೆ. ನೀನು ಇಲ್ಲಿ ಯೋಚನೆ ಬಿಟ್ಟು ಹಿಂದೆ ಮುಂದೆ ನೋಡದೇ ಮುನ್ನುಗ್ಗಿ ಯುದ್ಧ ಮಾಡಣ್ಣ.

(ಋ) ಪ್ರಿಯ ಮಿತ್ರ... ನಿನ್ನ ಮಿತ್ರ ಪಾಂಡುರಂಗನ ಸಂದೇಶ ಕೇಳು ನೀನು ದೇಶಕ್ಕಾಗಿ ಮಾಡುತ್ತಿರುವ ಸೇವೆ ಅಮೋಘವಾದದ್ದು. ದೇಶ ಮೊದಲು ದೇಹ ಆಮೇಲೆ ಅಂತ ಮೇಷ್ಟ್ರು ಹೇಳಿದ್ದನ್ನ ಅಕ್ಷರಶಃ ಪಾಲಿಸ್ತಿದೀಯ. ದೇಹದ ಯೋಚನೆ ಬಿಟ್ಟು ದೇಶಕ್ಕೋಸ್ಕರ ದುಡಿಯೋರೇ ನಿಜಾದ ದೇಶಭಕ್ತರು. ಅಂದ್ಹಾಗೆ ಪ

ಶತೃದೇಶದೋರು ಅಲ್ಲಲ್ಲಿ ಕೆಮಿಕಲ್ ವೆಪನ್ಸ್ ಹೂತಿಟ್ಟಿದಾರಂತೆ. ಅದು ಯಾರಿಗೂ ಗೊತ್ತಾಗೋಲ್ವಂತೆ. ಒಂದ್ ಕೆಲಸ ಮಾಡು ಒಬ್ಬ ಶತೃದೇಶದ ಯೋಧನ ಜೊತೆ ಸ್ನೇಹ ಬೆಳೆಸಿಕೊಂಡು ಏನಾದರೂ ಉಪಾಯ ಮಾಡಿ ವಿಷಯ ತಿಳ್ಕೊ. ಬೇಕಿದ್ರೆ ಆ ಯೋಧನಿಗೆ ನಿನ್ನನ್ನು ಮುಂದಿನ ಪ್ರಧಾನಿ ಅಥವಾ ರಾಷ್ಟ್ರಪತಿ ಮಾಡ್ತೀನಿ ಅಂತ ಆಸೆ ಹುಟ್ಟಿಸು... ಮರೀಬೇಡ... ಪಾಕಿಸ್ತಾನಿಯೋ... ಇಟಾಲಿಯೋ.. ಇನ್ನೊಂದೋ ಯಾರಾದ್ರೇನು ನಮ್ಮನ್ನು ಆಳೋಕೆ... ಎಲ್ಲಾರೂ ನಮ್ಮವರೇ ಅಂತ ನಂಬೋ ಬೇಕೂಫರು ತಾನೇ ನಾವು... ಕೆಮಿಕಲ್ ವೆಪನ್ಸ್ ವಿಚಾರ ಮರೀಬೇಡಪ್ಪ.

(ಎ) ಪ್ರೀತಿಯ ಕಂದಾ... ವೆಂಕಟೇಶ... ನಿಮ್ಮಮ್ಮನ ಸಂದೇಶ ಕೇಳಪ್ಪ... ನೋಡು ನೀನು ಯುದ್ಧಕ್ಕೆ ಹೋದಾಗ್ಲಿಂದ ನಿನ್ನ ಮೇಲಿನ ಪ್ರೀತಿ ಹೆಚ್ಚಾಗಿದೆ. ಯಾಕೇಂದ್ರೆ ತುಂಬಾ ದೂರ ಇದೀಯಲ್ಲ... ನೀನು ಯುದ್ಧಕ್ಕೆ ಹೋದ್ಮೇಲೆ ಇಲ್ಲಿ ನಿನ್ ಹೆಂಡ್ತಿ... ಅವರ ಬದಲಿಗೆ ಈ ಮುದಿ ಗೂಬೇನ ಯುದ್ಧಕ್ಕೆ ಕಳಿಸ್ಬೇಕಿತ್ತು ಅಂತ ಹೇಳ್ಕೊಂಡು ತಿರುಗ್ತಿದಾಳೆ. ಅನ್ನಿ ಪಾಪ ಚಿಕ್ ವಯಸ್ಸು... ವೆಂಕಟೇಶಾ... ಯುದ್ಧ ಮುಗಿಸ್ಕೊಂಡು ಬೇಗ ಬಂದ್‌ಬಿಡೋ... ಬಂದ್ಮೇಲೆ ನಾನು ನಿಮ್ಮಿಬ್ಬರ ಸುಖಕ್ಕೆ ಅಡ್ಡಿ ಬರಲ್ಲ ಕಣೋ... ನನಗೋಸ್ಕರ ನೀನು ನಿನ್ನ ಹೆಂಡ್ತೀನ ಹೊಡೀಬೇಕಿಲ್ಲ. ಆಮೇಲೆ ಸಮಾಧಾನ ಮಾಡೋಕೆ ರೇಷ್ಮೆ ಸೀರೆ ತಂದುಕೊಡಬೇಕಿಲ್ಲ. ಅವಳು ನಿನ್ನ ಕಿವಿ ಚುಚ್ಚೋದೂ ಬೇಡ... ನೀನವಳ ಕಿವಿ ಕಚ್ಚೋದೂ ಬೇಡ. ಇಷ್ಟು ಸಂತೋಷದ ಸಮಾಚಾರ ಕೇಳಿ ಖುಷಿಯಾಗಿ ಯುದ್ಧ ಮಾಡೋದು ಬಿಟ್ ಬರಬೇಡ. ದಿನಾ ದೇವರ ಧ್ಯಾನ ಮಾಡೋದು ಮರೀಬೇಡಪ್ಪ... ಬೇಗ ಬರ್ತೀಯಾ... ಬರೋ ಹೊತ್ಗೆ ನಿಂಗೆ ತಂಬಿಟ್ಟು, ಚಕ್ಕುಲಿ ಎಲ್ಲ ಮಾಡಿಟ್ಟಿರ್ತೀನಿ.

(ಏ) ಈ ಸಂದೇಶ ರಾಘುಗೆ... ಅವಳ ತಾಯಿಯಿಂದ.

ಅಯ್ಯೋ ದರಿದ್ರ ಮುಂಡದೇ... ಯುದ್ಧಕ್ಕೆ ಹೊಗ್ತೀನಿ ಅಂತ ಹೇಳಿ ಇಂಥಾ ಕೆಲಸವೇನೋ ಮಾಡೋದು... ಅಲ್ಲ... ಇಲ್ಲಿ ಈ ಊರಲ್ಲಿ ನಾನು ನಮ್ಮ ರಾಘು ಯುದ್ಧಕ್ಕೆ ಹೋಗಿದಾನೆ ಅಂತ ಹೇಳಿ ಸಂತೋಷ ಪಡ್ತಿದ್ರೆ ಅಲ್ಲಿ ನೀನು ಮಾಡ್ತಿರೋದೇನು... ಮೊನ್ನೆ ಸ್ಟಾರ್ ಟೀವೀಲಿ ಸೈನಿಕರ ವಿವರ ತೋರಿಸ್ತಿದ್ರು... ಅಲ್ಲ ಕಣೋ ಒಂದು ಟೆಂಟ್ ಕೆಳಗೆ ನೀನು ಚಪಾತಿ ಲಟ್ಟಿಸಿ ಬೇಯಸ್ತಾ ಇದ್ಯಲ್ಲೋ... ಇದೇನಾ ನೀನು ಮಾಡ್ತಿರೋ ಯುದ್ಧ. ಅಲ್ಲ ಚಪಾತಿ ಲಟಿಸೋಕೆ ಅಷ್ಟು ದೂರ ಹೋಗಬೇಕಿತ್ತಾ ಇಲ್ಲೇ ಗುಂಡಪ್ಪನ ಹೋಟ್ಲಲ್ಲಿ ಸೇರ್ಕೊಂಡಿದ್ರೆ ಆಗ್ತಿರ್ಲಿಲ್ವ. ನೋಡು... ಈಗಲೂ ಕಾಲ ಮಿಂಚಿಲ್ಲ... ನೆಟ್ಟಗೆ ಬಂದೂಕ ತಗೊಂಡು ಯುದ್ಧ ಮಾಡು ಇಲ್ದಿದ್ರೆ ತೆಪ್ಪಗೆ ಹಿಂದಕ್ಕೆ ಬಂದು ಗುಂಡಪ್ಪನ ಹೋಟ್ಲು ಸೇರ್ಕೊ... ಒಂದ್ ಕಿವಿ ಮಾತು ಕೇಳು... ಚಪಾತಿ ಮಾಡ್ತಿರುವಾಗ ಸತ್ರೆ ಹೆಚ್ಗೆ ಕಾಂಪೆನ್‌ಸೇಷನ್ ಇಲ್ವಂತೋ... ಬದುಕಿರುವಾಗ ಬುದ್ಧಿ ಇಲ್ಲ... ಮುಂಡೇದೇ ಸಾಯುವಾಗ್ಲಾದ್ರೂ ಬುದ್ಧಿ ಬೇಡ್ವೆ, ನಾ ಹೇಳಿದ್ದು ಜ್ಞಾಪ್ಕ ಇದೆ ತಾನೆ!

# ಉತ್ತರ 'ಧೂಪ'

– ಕೃಷ್ಣ ಸುಬ್ಬರಾವ್

ಸುಧಾ ವಾರಪತ್ರಿಕೆಯ ಪ್ರಾರಂಭದಿಂದ ಅನೇಕ ವರ್ಷ ಓದುಗರನ್ನು ತಮ್ಮ ಉತ್ತರಗಳಿಂದ ರಂಜಿಸಿದ, ಪ್ರಚೋದಿಸಿದ ಬೀchi ವಾರದಿಂದ ವಾರಕ್ಕೆ ಸುಧಾ ಪತ್ರಿಕೆಯನ್ನು ಕಾಯುವ ಹಾಗೆ ಮಾಡಿದವರು. ಎಂತಹ ಪ್ರಶ್ನೆಯಾದರೂ ಉತ್ತರ ಆಕರ್ಷಕ ಹಾಗೂ ಅತ್ಯಂತ ಸಮರ್ಪಕ. ಕೆಲವನ್ನು ಮಾತ್ರ ಆರಿಸಿದ್ದೇವೆ.

**ಅಕಾಲ ಮೃತ್ಯು**

ಪ್ರ - ಎಷ್ಟೇ ತಡವಾಗಿ ಸತ್ತರೂ ಅಕಾಲ ಮೃತ್ಯು ಎನ್ನುವರಲ್ಲಾ ಸಕಾಲ ಮೃತ್ಯು ಯಾವಾಗ?

ಉ - ಸಾಲ ಹೆಚ್ಚು ಇರುವಾಗ ಸಾಯುವುದು ಸಕಾಲ ಮೃತ್ಯು.

**ಅಗ್ನಿಸಾಕ್ಷಿ - ಆತ್ಮಸಾಕ್ಷಿ**

ಪ್ರ - ಅಗ್ನಿಸಾಕ್ಷಿಗೂ ಆತ್ಮಸಾಕ್ಷಿಗೂ ಭೇದವೇನು?

ಉ - ಕೈ ಹಿಡಿಯುವಾಗ ಅಗ್ನಿಸಾಕ್ಷಿ ಅನ್ನುತ್ತೇವೆ. ಕೈ ಕೊಡುವಾಗ ಆತ್ಮಸಾಕ್ಷಿ ಅನ್ನುತ್ತೇವೆ.

**ನಾಯಿ - ನಾಲಗೆ**

ಪ್ರ - ನಾಯಿಯ ಬಾಲಕ್ಕೂ ನರನ ನಾಲಗೆಗೂ ಸಾಮ್ಯವಿದೆಯೆ?

ಉ - ಇದೆ. ಆದರೆ ನಾಯಿ ತನ್ನ ಬಾಲವನ್ನು ಸಮಯೋಚಿತವಾಗಿ ಮಾತ್ರ ಆಡಿಸುತ್ತದೆ.

**ಸಂಪತ್ತು - ಸಂತಾನ**

ಪ್ರ - ಅತೀ ಕಡಿಮೆ ವೇತನ ಪಡೆಯುವ ಉಪಾಧ್ಯಾಯರಿಗೇ ಮಕ್ಕಳು ಜಾಸ್ತಿ ಆಗಲು ಕಾರಣವೇನಿರಬಹುದು?

ಉ - ದೇವರು ನ್ಯಾಯಶೀಲ, ಯಾರಿಗೂ ಅನ್ಯಾಯ ಮಾಡಿಲ್ಲ ಕೆಲವರಿಗೆ ಸಂತಾನ, ಕೆಲವರಿಗೆ ಸಂಪತ್ತು ಕೊಟ್ಟಿದ್ದಾನೆ. ಎರಡೂ ಬೇಕೆಂಬ ದುರಾಶೆ ಬೇಡ.

**ನಿದ್ರೆ - ಓದು**

ಪ್ರ - ನೀವು ಎಲ್ಲಿಯವರೆಗೂ ಓದಿದ್ದೀರಿ?

ಉ - ನಮ್ಮ ತಾಯಿಗೆ ನಿದ್ರೆ ಬರುವವರೆಗೂ

## ಕಾಂದಕ್ಟ್ ಸರ್ಟಿಫಿಕೇಟ್

ಪ್ರ - ನಮ್ಮ ಪಕ್ಕದ ಮನೆಯಲ್ಲಿ ಅಕ್ಕ-ತಂಗಿಯರಿಬ್ಬರಿದ್ದಾರೆ. ನಾನು ಹೊರಗಡೆ ಬಂದು ನಿಂತರೆ ತಕ್ಷಣ ಒಳಕ್ಕೆ ಹೋಗುತ್ತಾರೆ.

ಉ - ಇದೇ ನಿಮಗೆ ದೊರೆತ ಕಾಂಟಕ್ಟ್ ಸರ್ಟಿಫಿಕೇಟ್

## ಕಾರು - ಬಾರು

ಪ್ರ - ಒಬ್ಬ ಹೆಂಗಸು ಕಾರು ನಡೆಸುತ್ತಿರುವಾಗ ನೀವೆಲ್ಲಿ ಕುಳಿತುಕೊಳ್ಳಲು ಇಚ್ಛೆಸುತ್ತೀರಿ?

ಉ - ಆ ಕಾರು ಬಾರದ ಸ್ಥಳದಲ್ಲಿ

## ಲಕ್ಷ್ಮಿ - ನಾರಾಯಣ

ಪ್ರ - ಹೆಣ್ಣು ಗೃಹಲಕ್ಷ್ಮಿಯಾದರೆ ಗಂಡು ಏನು?

ಉ - ಬೀದಿ ನಾರಾಯಣ

## ಕಣ್ಣು - ಮಣ್ಣು

ಪ್ರ - ಕಾನೂನಿಗಿಂತಲೂ ಹೆಚ್ಚಿನ ಶಕ್ತಿ ಹೆಣ್ಣಿನ ಕಣ್ಣೀರಲ್ಲಿ ಇದೆಯಂತೆ ಆದರೆ ಗಂಡಸಿನ ಕಣ್ಣಲ್ಲಿ?

ಉ - ಮಣ್ಣು ಇದೆ. ಹೆಣ್ಣಿನ ಕಣ್ಣೀರಿಗೆ ಕರಗುತ್ತದೆ.

## ಪರಿಹಾರ

ಪ್ರ - ನಾನು ಪ್ರತಿ ನಿತ್ಯವೂ ಚಹಾ ಕುಡಿಯುವಾಗ ಸ್ವಲ್ಪವಾದರೂ ಚಹ ನನ್ನ ಅಂಗಿಯ ಮೇಲೆ ಬೀಳುತ್ತದೆ. ಅದಕ್ಕೆ ಪರಿಹಾರ?

ಉ - ಬಹಳ ಸುಲಭ! ಕಾಫಿ ಕುಡಿಯಿರಿ, ಆಗ ಚಹಾ ಗ್ಯಾರಂಟಿ ಬೀಳುವುದಿಲ್ಲ.

## ಗ್ರಹಣ

ಪ್ರ - ಚಂದ್ರಗ್ರಹಣದ ಪಾಣಿಗ್ರಹಣ - ಇವುಗಳ ವ್ಯತ್ಯಾಸ?

ಉ - ಒಂದು ತಾನಾಗಿ ಬಿಡುತ್ತದೆ. ಇನ್ನೊಂದನ್ನು ಬಿಡಿಸಿಕೊಳ್ಳಲು ಕೋರ್ಟಿಗೇ ಹೋಗಬೇಕು.

## ಓಟ

ಪ್ರ - ನಮ್ಮ ಮನೆಯ ಎಲೆಕ್ಟ್ರಿಕ್ ಮೀಟರು ಲೈಟು ಉರಿಸದಿದ್ದರೂ ಓಡುತ್ತಲೇ ಇರುತ್ತದೆಯಲ್ಲ ಕಾರಣ?

ಉ - ಅಂತಹ ತಲೆಗಳು ನಮ್ಮ ದೇಶದಲ್ಲಿ ಅನೇಕ ಇವೆ. ಬರಿ ಓಟ. ಪ್ರಯೋಜನ ಮಾತ್ರ ಎಷ್ಟೂ ಇಲ್ಲ.

### ದೊಡ್ಡವರು

ಪ್ರ - ತಾಯಿಗಿಂತ ದೊಡ್ಡವರಾರು?

ಉ - ತಂದೆ, ವಯಸ್ಸಿನಲ್ಲಿ

### ಸುರಕ್ಷೆ

ಪ್ರ - ಗಿಡ, ಮುಡಿ, ಗುಡಿ - ಈ ಮೂರು ಸ್ಥಳಗಳಲ್ಲಿ ಹೂವು ಎಲ್ಲಿದ್ದರೆ ಸುರಕ್ಷಿತವಾಗಿರಬಹುದು?

ಉ - ಸುರಕ್ಷಿತವೆಂಬುದೊಂದೇ ಮುಖ್ಯವಾದಲ್ಲಿ ತಿಪ್ಪೆ ಅತ್ಯುತ್ತಮ ಸ್ಥಳ.

### ಸಿರಿ - ರೂಪ - ಶಕ್ತಿ

ಪ್ರ - ಸಿರಿ, ರೂಪ ಶಕ್ತಿ ಮತ್ತು ಯೌವನ ಇವು ಕೇಡಿಗೆ ಮಾರ್ಗ ತೋರಿಸುತ್ತವೆಯೋ? ಅಥವಾ ಒಳ್ಳೆಯದಕ್ಕೊ?

ಉ - ವಿದ್ಯುಚ್ಛಕ್ತಿಯಂತೆ ಇವೆಲ್ಲವೂ - ಬೇಕಾದರೆ ಹಚ್ಚಿ ಬೆಳಕು ಮಾಡಿಕೊಳ್ಳಿ, ಬೇಡಾದರೆ ಹಿಡಿದು ಆತ್ಮಹತ್ಯೆ ಮಾಡಿಕೊಳ್ಳಿ.

### ಜುಬ್ಬದ ವ್ಯತ್ಯಾಸ

ಪ್ರ - ಪ್ರಧಾರಿಗಳ ಜುಬ್ಬಕ್ಕೂ ಸಾಹಿತಿಗಳ ಜುಬ್ಬಕ್ಕೂ ಇರುವ ವ್ಯತ್ಯಾಸ?

ಉ - ಸಾಹಿತಿಯ ಹೃದಯ ತುಂಬಿರುವುದರಿಂದ ಅವರ ಜುಬ್ಬದ ಜೇಬು ಸದಾ ಖಾಲಿ. ಪುಢಾರಿಯದು ತದ್ವಿರುದ್ಧ.

### ಸಾಧ್ಯ - ಸಾಧು

ಪ್ರ - ಸಂಸಾರವನ್ನೇ ತ್ಯಜಿಸಿ ಮಾನವನು ಬದುಕಲು ಸಾಧ್ಯವೆ?

ಉ - ಸಾಧ್ಯ. ಸಾಧ್ಯವಾದುದೆಲ್ಲವನ್ನೂ ಮಾಡಬಾರದು. ಸಾಧುವಾದುದನ್ನು ಮಾಡಬೇಕು. ಉದಾಹರಣೆ: ಆತ್ಮಹತ್ಯೆ ಸಾಧ್ಯ. ಒಳ್ಳೆಯವನಾಗಿ ಬಾಳುವುದು ಸಾಧು.

### 'ಭೂತ'ಕಾಲ

ಪ್ರ - ಸಂಸಾರವೆಂದರೆ ಎಲ್ಲರೂ ಹೆದರುತ್ತಾರಲ್ಲಾ, ಅದರಲ್ಲೇನಾದರೂ ಭೂತ ಅಡಗಿದೆಯೇನಣ್ಣಯ್ಯಾ?

ಉ - ಛೆ ಛೆ! ಯಾರು ಹೇಳಿದರು? ಅಡಗಿಲ್ಲ.

### ಸದಾ ಸಂತೋಷ

ಪ್ರ - ಜೀವನದಲ್ಲಿ ಸದಾ ಸಂತೋಷವಾಗಿರುವುದು ಹೇಗೆ ಸಾಧ್ಯ?

ಉ - ಸದಾ ಸಂತೋಷವೇ ಆದರೆ ಏನಪ್ಪಾ ಗತಿ! ಆಗ ದುಃಖವನ್ನು ಬ್ಲಾಕ್‌ಮಾರ್ಕೆಟ್‌ನಲ್ಲಿ ಕೊಳ್ಳಬೇಕಾಗುತ್ತದೆ.

# ವೈದ್ಯನ ಪಾಡು!

– ಡಾ।। ಪ್ರಕಾಶ್

ವಿಧಿ, ಅನಿಲ್ ಕುಂಬ್ಳೆಯ ರೀತಿಯಲ್ಲಿ, ನನಗೆ ಒಂದಾದ ಮೇಲೆ ಒಂದರಂತೆ ಗೂಗ್ಲಿಗಳನ್ನೇ ಬೌಲ್ ಮಾಡಲು ಆಂಭಿಸಿತು. ನಾನು, ಭಯವಿಹ್ವಲನಾಗಿ, ನನ್ನ ಹಳೆಯ ಸ್ನೇಹಿತ, ನಾಡೀಶಾಸ್ತ್ರ ತಜ್ಞನ ಹತ್ತಿರ ಹೋದೆ. ನನ್ನ ಚರಿತ್ರೆ, ಗ್ರಹಗತಿ, ಹೆಬ್ಬೆಟ್ಟು ಚಿತ್ರ ಎಲ್ಲವನ್ನೂ ಕೂಲಂಕುಶವಾಗಿ ಅಧ್ಯಯನ ಮಾಡಿ, ''ನಿನ್ನ ಪೂರ್ವಜನ್ಮದಲ್ಲಿ ನೀನು ಅತಿ ನೀಚನಾದ ರೆವಿನ್ಯೂ ಮಂತ್ರಿಯಾಗಿದ್ದೆ! ಆಗ ನುಂಗಿದ ಲಂಚದ ಕರ್ಮಫಲದಿಂದ, 'ಈ ಜನ್ಮದಲ್ಲಿ ಬೆಂಗಳೂರಿನಲ್ಲಿ ವೈದ್ಯನಾಗು' ಎಂದು ವಿಧಿ ಶಿಕ್ಷೆ ವಿಧಿಸಿದೆ! ಆದರೆ, ಒಂದು ಸಿಲ್ವರ್ ಲೈಸಿಂಗನ್ನೂ ದಯಪಾಲಿಸಿದೆ. ನಿನಗೆ, ವೈದ್ಯ ಜೀವನದ ಉದ್ದಕ್ಕೂ ಹಾಸ್ಯ ಭರಿತ ಸನ್ನಿವೇಶಗಳು ದೊರಕುತ್ತವೆ!'' ಎಂದು ನುಡಿದು, ''ನೆಕ್ಸ್ಟ್ ಕೇಸ್'' ಅಂತ ಕೂಗಿದ. ಓದುಗರಿಗೆ ನಾಡೀ ಶಾಸ್ತ್ರದಲ್ಲಿ ನಂಬಿಕೆ ಇಲ್ಲದಿದ್ದರೂ, ಕೆಳಗೆ ಉಲ್ಲೇಖಿಸಿರುವ (ಸತ್ಯ) ಸಂಗತಿಗಳನ್ನು ಓದಿದ ಮೇಲೆ ಆಶ್ಚರ್ಯವಾಗುವುದರಲ್ಲಿ ಸಂಶಯವಿಲ್ಲ!

ಮೊನ್ನೆ ಆಸ್ಪತ್ರೆಯಲ್ಲಿ, ಲಿಫ್ಟ್‌ಗೆ ಕಾಯುತ್ತ ನಿಂತಿದ್ದೆ. ಒಬ್ಬ ಧಡೂತಿ ಆಸಾಮಿ ಹತ್ತಿರ ಬಂದ. ನನ್ನ ಕಡೆ ನೋಡಿ, 'ಮೈ ವೈಫ್ ಈಸ್ Fourth Floor!'' ಅಂದ. ನಾನು ಚಕಿತನಾದರೂ, ಅವನ ಮಾತಿನ ಅರ್ಥ ಆಯಿತು. 'ಏನು?' ಎಂದೆ.

'ಐ ವಾಂಟ್ ಯೂ ಟು Demolish her! ಅಂದ. ನನಗೆ ಗಾಬರಿ ಆಯ್ತು! ನನ್ನ ಸಹೋದ್ಯೋಗಿ, ''ಅದು ಆಗುಲ್ಲ, But we can discharge her!'' ಅಂದು ನನ್ನ ಸಮಸ್ಯೆ ಪರಿಹರಿಸಿದ!

★★★

ಕಾರಿನಿಂದ ಇಳಿದು, ವಾರ್ಡ್ ಬಳಿ ನಡೆಯುತ್ತಿದ್ದೆ. ಒಬ್ಬ ಸೂಟ್‌ಧಾರಿ ಸ್ಮಾರ್ಟ್ ಯುವಕ, ನನ್ನ ಬಳಿ ಬಂದು, ''ಗೈನಕಾಲಜಿ ತಜ್ಞರನ್ನ ನೋಡಬೇಕು! ಅವರ ಆಫೀಸ್ ಎಲ್ಲಿ?'' ಅಂದ. ನಾನು ಚಕಿತನಾಗಿ, ಪೇಶೆಂಟ್ ಎಲ್ಲಿ ಅಂದೆ. ಅವನು, ''ಇಲ್ಲ, ನಾನೇ ನೋಡಬೇಕು!'' ಅಂದ. ದೂರದಲ್ಲಿ ನನ್ನ ಗೆಳೆಯ ಸೈಕಿಯಾಟ್ರಿಸ್ಟ್ ನಡೆದು ಹೋಗುತ್ತಿದ್ದ. ಈ ಪ್ರಭೃತಿಯನ್ನ ಅವನ ಬಳಿ ಕಳಿಸಲೇ ಎಂದು ಯೋಚಿಸಿದೆ. ಆಗ, ಬುದ್ಧನಿಗೆ ಆದಂತೆ, ನನಗೆ ಜ್ಞಾನೋದಯ ಆಯಿತು. ಹೌದು, ಅವನು ಡ್ರೆಗ್‌ಕಂಪೆನಿ ರೆಪ್ರೆಸೆಂಟಿಟಿವ್!!

★★★

ಸಿಗರೇಟು ಹಾಗೂ ಅದನ್ನ ಸೇದುವ ಚಟ ಇರುವವರನ್ನ ಕಂಡರೆ ನನಗೆ ನುಖಶಿಖಾಂತ ಕೋಪ ಬರುತ್ತೆ. ಧೂಮಪಾನದಿಂದಾಗುವ ಅನಾಹುತಗಳ ಬಗ್ಗೆ ಸದಾ ನಾನು ಲೆಕ್ಚರ್ ಕೊಡ್ತಾ ಇರ್ತೀನಿ. ಹೋದವಾರ, ಒಂದು ಸಭೇಲಿ, ಇದೇ ಸಬ್ಜೆಕ್ಟ್ ಮೇಲೆ ಭಾಷಣ ಬಿಗಿದೆ. ಕೊನೆಗೆ, ಪ್ರಶ್ನೋತ್ತರದ ಸಮಯದಲ್ಲಿ, ಒಬ್ಬ ವ್ಯಕ್ತಿ ನಿಂತ. ಭಾರೀ ಗಾತ್ರ, ಮಿಲಿಟರಿ ಮೀಸೆ, ನೋಡಿದರೆ ಗಾಬರಿ ಆಗುವಂತಹ ಹುಬ್ಬುಗಳು! "ಡಾಕ್ಟರ್, ನೀವು ಹೇಳಿದ್ದೆಲ್ಲ ನಿಜ ಇರಬಹುದು! ಆದರೆ, ನನ್ನ ಹೇಳಿಕೆ ಪ್ರಕಾರ, ಸಿಗರೇಟ್ಸ್ can save life!" ಅಂದ. ನನಗೆ ಭಯ ಆಯ್ತು. ಸಭಿಕರಲ್ಲಿ ಕೆಲವರು ನಗಲಾರಂಭಿಸಿದರು. ಆ ವ್ಯಕ್ತಿ, Let me Explain! ನಾನು ಆರ್ಮೀಲಿ ಮೇಜರ್ ಆಗಿದ್ದಾಗ ಸ್ಮೋಕ್ ಮಾಡ್ತಾ ಇದ್ದೆ. ನನ್ನ ಸ್ನೇಹಿತನೊಬ್ಬ ಒಂದು ಬೆಳ್ಳಿಯ ಸಿಗರೇಟ್ ಕೇಸ್ ಕೊಟ್ಟಿದ್ದ. ಅದು ಸದಾ ನನ್ನ ಎಡ ಜೇಬಿನಲ್ಲಿ ಕೂತಿರೋದು! ಬಾರ್ಡರ್ ಕದನದಲ್ಲಿ ಒಂದು ಬುಲೆಟ್ ಸರಿಯಾಗಿ ನನ್ನ ಹೃದಯಕ್ಕೇ ಹೋಗಬೇಕಾಗಿತ್ತು! ಮಧ್ಯೆ ಈ ಸಿಗರೇಟ್ ಕೇಸ್! ಎಲ್ಲಿ "ವಿಧಿ ವಿಲಾಸ್" ಅಂದ. ಸಭಿಕರ ಜತೆ ನಾನೂ ನಕ್ಕೆ!!



ಆಸ್ಪತ್ರೆ ಫಾರ್ಮಸಿ ಹತ್ತಿರ ಕ್ಯೂನಲ್ಲಿ ಜನ ಕಾಯುತ್ತ ನಿಂತಿದ್ದರು. ಇದ್ದಕ್ಕಿದ್ದಂತೆ, ಒಬ್ಬ ಭಾರೀ ಗಾತ್ರದ (ಸುಮಾರು ತೊಂಬತ್ತು ಕೆ.ಜಿ.) ಸಿಲ್ಕ್ ಜುಬ್ಬ, ಗಾಂಧೀ ಟೋಪಿ ಆಸಾಮಿಯೊಬ್ಬ, ಕ್ಯೂನ ಬೈಪಾಸ್ ಮಾಡಿ ಕೌಂಟರ್ ಹತ್ರ ಹೋದ, ಜನರೆಲ್ಲ 'ಹಿಂದೆ ಬನ್ರೀ', ಅಂತ ರೇಗಿದರು. ಆ ಪುಢಾರಿ, ಕೌಂಟರ್‌ನ ಕ್ಯಾಷಿಯರ್ ಹತ್ರ, "ನಾನು ಗ್ರಾಮೀಣ ಬ್ಯಾಂಕ್ ಅಧ್ಯಕ್ಷ!" ಎಂದು ದರ್ಪದಿಂದ ಹೇಳಿದ!

ಆ ಕ್ಯಾಷಿಯರ್ ಬಹು ಚೂಟಿ! ಅವನು ನಿಧಾನವಾಗಿ, "ಸ್ವಾಮಿ, ನೀವು ಕಿಲೋಗ್ರಾಮೀಣ ಬ್ಯಾಂಕ್ ಅಧ್ಯಕ್ಷರಾದರೂ ಕ್ಯೂನಲ್ಲಿ ಬರಲೇಬೇಕು!" ಅಂದ. (ಅಧ್ಯಕ್ಷರನ್ನ ಬಿಟ್ಟು) ಎಲ್ಲ ನಕ್ಕರು! ಕ್ಯೂನಲ್ಲಿ ಮುಂದೆ ನಿಂತಿದ್ದವನೊಬ್ಬ, "ಹೋಗಲಿ ಬಿಡಿ, ಪಾಪ, ಆತುರದಲ್ಲಿ ಇದಾರೆ! ಅವರಿಗೇ ಜಾಗ ಕೊಡೋಣ" ಅಂದ!



ಶ್ರೀನಿವಾಸ ಶಾಸ್ತ್ರಿಗಳಿಗೆ ೭೫ ವಯಸ್ಸು. ರಸ್ತೆ ಕ್ರಾಸ್ ಮಾಡ್ತಿದ್ದಾಗ, ಒಂದು ಭಾರೀ ಮೋಟರ್ ಸೈಕಲ್, ಅದಕ್ಕೆ ಅನುರೂಪನಾದ ಕರಾಳ ಸವಾರ ಹಠಾತ್ತನೆ ಬಂದು, ಅನಾಹುತ ಆಯ್ತು. ತಕ್ಷಣ ಶಾಸ್ತ್ರಿಗಳನ್ನ ಎಮರ್ಜೆನ್ಸಿ ವಾರ್ಡಿಗೆ ರವಾನಿಸಿದೆವು. ಎರಡೇ ನಿಮಿಷದಲ್ಲಿ, ಕಣ್ಣು ತೆರೆದು ನನ್ನಕಡೆ ನೋಡಿದರು.

'ನೀನ್ ಯಾಕಪ್ಪಾ ಇಲ್ಲಿಗೆ ಬಂದೆ?' ಅಂತ ಚೀರಿದರು. ''ಈ ನರಕಕ್ಕೇ?'' ಅಂತ ಸೇರಿಸಿದರು. ನನಗೆ ಕೋಪ ಬಂತು. ನಂ ಆಸ್ಪತ್ರೆ ಎಷ್ಟು ಕ್ಲೀನಾಗಿ, ಚೆನ್ನಾಗಿದೆ, ಇದನ್ನ ನರಕ ಅಂತಾರಲ್ಲ! ತಲೆಗೆ ಏಟುಬಿದ್ದು ಕನ್‌ಕಶನ್ ಆಗಿದೆ! ಒಂದು ದಿನ ನೋಡೋಣ! ಬೇಕಾದರೆ ಸಿ.ಟಿ. ಸ್ಕ್ಯಾನ್ ಮಾಡೋಣ ಅಂತ ಯೋಚಿಸಿದೆವು. ವಾರ್ಡ್ ಹೊರಗೆ ಬಂದಾಗ, ಆ ಮೋಟರ್ ಸೈಕಲ್ ಸವಾರ ಪಾಪ, ಇನ್ನೂ ಅಲ್ಲೇ ನಿಂತಿದ್ದ. 'ನಂದೇನೂ ತಪ್ಪಿಲ್ಲ ಸಾರ್! ಇದ್ದಕ್ಕಿದ್ದ ಹಾಗೇ ಮುಂದೆ ಬಂದರು. ನಾನು ಬ್ರೇಕ್ ಹಾಕಿದೆ. ಸ್ವಲ್ಪ ಟಚ್ ಆಯ್ತು ಅಷ್ಟೇ!' ಅಂದ. ಆತ ಭಾರೀ ವ್ಯಕ್ತಿ; ಕಪ್ಪು ಮೀಸೆ - ವೀರಪ್ಪನ್ ಸ್ಟೈಲ್, ಕಪ್ಪು ಹೆಲ್ಮೆಟ್ ಬೇರೆ ತಲೇ ಮೇಲೆ! ಅವನ ಮೋಟರ್ ಸೈಕಲ್ ನೋಡಿದ ತಕ್ಷಣ ನನ್ನ ಬ್ರೇನ್ ಶರ್ಲಾಕ್ ಹೋಮ್ಸ್‌ನ ತರಹ ಕೆಲಸ ಮಾಡಿತು! ಅವನ ಮೋಟರ್ ಸೈಕಲ್ ಕರೀ ಬಣ್ಣದ ಭಾರೀ ಗಾತ್ರದ ವಾಹನ. ಅದರ ಹೆಸರಿನ yamaha ಅನ್ನೋದರಲ್ಲಿ ha ಸ್ವಲ್ಪ ಅಳಿಸಿ ಹೋಗಿತ್ತು! ನೆಲಕ್ಕೆ ಬಿದ್ದಿದ್ದ ಶಾಸ್ತ್ರಿಗಳಿಗೆ ಕಂಡಿದ್ದು ಈ ನಾಮದ ವಾಹನ ಮತ್ತು ಅದರ ಅಧಿಪತಿ!! ಅವರು ಹೆದರಿದ್ದು ಸಹಜವೇ!!

ಹೀಗೇ ಬರೀತಾ ಹೋದ್ರೆ, ಇವನಿಗೆ ವೈದ್ಯನ ಕೆಲಸ ಮಾಡುಕ್ಕೆ ಟೈಂ ಎಲ್ಲಿ ಅಂತ ನಿಮಗೆ ಸಂಶಯ ಬರಬಹುದು! ಅದಕ್ಕೇ ಇಲ್ಲೇ ನಿಲ್ಲಿಸ್ತೀನಿ!

★★★



''ಕೋರ್ ಗ್ರೂಪ್‌ಗೆ ಡಯಟ್ ಮಾಡ್ದೇ
ಇರೋರ್ನೇ ಆರಿಸೋದು ವಾಸಿ ರೀ''




– ಗುಂಡೂರಾವ್

ವಯಸ್ಸಾಗ್ತಾ ಬಂತು ನೋಡಿ, ಬೆಳಿಗ್ಗೆ ಬೇಗ ಎಚ್ಚರ ಆಗಿಬಿಡುತ್ತೆ. ಕಣ್ಬಿಟ್ಟ ತಕ್ಷಣ ಓಡಬೇಕು ಹಿತ್ಲಿಗೆ. (ಇದು ಈಗಿಲ್ಲ, ಮುಂಚೆ ಇತ್ತು) ಇದು ಹುಟ್ಟಿನಿಂದ ಬಂದ ಹ್ಯಾಬಿಟ್. ಸರಿ ಅದು ಆಗೋ ಹೊತ್ತಿಗೆ, ಇದ್ದ ಉಳಿದ ನಿದ್ದೇನು ಮಾಯಾ. ಏನೋ, ಯಾವುದೋ ಹುಳು ಕೊರಿಯೋಕೆ ಶುರು ಮಾಡುತ್ತೆ.

ಮನಸ್ಸು ಹುಟ್ಟಿದಾಗಿನಿಂದ ಸಾಯೋವರೆಗೂ ದುಡಿತಿರೋ ಒಂದೇ ಒಂದು ನಮ್ಮ ದೇಹದಲ್ಲಿ, ಹೃದಯ, lungsಗಳ ಜೊತೆಗೆ, ಹೃದಯ. lungsಗಳು ಮಾಡುವ ಕೆಲಸ ನಮಗೆ direct ಆಗಿ ತಿಳಿಯೋದೇ ಇಲ್ಲ, ಅವುಗಳೇನಾದರೂ ರಿಪೇರಿಗೆ ಬರದಿದ್ದರೆ. ಎಷ್ಟೊ ಜನರನ್ನು ನೋಡಿದರೆ, ಅವರಿಗೆ ಹೃದಯ ಇದೆಯೇ ಅಂತ ಅನ್ಸಲ್ವ ನಿಮ್ಗೆ? ಆದರೆ ಮನಸ್ಸಿನ ಕೆಲಸ ಹಾಗಲ್ಲ. ಅದು ಮಾಡೋದೆಲ್ಲ ನಮಗೆ ತಿಳೀಲೇಬೇಕು.

ಆಗ್ಲೇ ಹೇಳಿದ್ನಲ್ಲಾ, ವಯಸ್ಸಾಗ್ತಾ ಬಂತು ಅಂತ. ಏನೋ ಹೇಳೋಕೆ ಹೋಗೋದು, ಮತ್ತಿನ್ನೇನನ್ನೋ ಹೇಳೋದು.

ಹುಳು ಕೊರಿಯೋಕೆ ಶುರು ಮಾಡಿದರೆ, ದಿನ ಶುರು ಆದ ಹಾಗೇನೆ. ಇನ್ನೇನು, ಉಜ್ಜಿದ ಹಲ್ಲನ್ನೇ (ಇನ್ನೂ ಇದ್ದರೆ) ಉಜ್ಜೋದು, ಬೋಳಿಸಿದ ಮುಖಾನೆ ಬೋಳಿಸೋದು, ತೊಳೆದ ಮುಖಾನೆ ತೊಳೆಯೋದು. ದಿನ ಎಷ್ಟು ಬೇಗ ಕಳೆಯುತ್ತೆ ಅಂದರೆ, ಮೇಲಿನ ಕೆಲಸಗಳನ್ನು continuous ಆಗಿ ಮಾಡ್ತಾನೆ ಇದೀನಿ ಅಂತ ಅನ್ಸುತ್ತೆ ನಂಗೆ.

ಸರಿ, ಇದೆಲ್ಲಾ ಆದಮೇಲೆ, ಒಂದು ಕಪ್ ಬೆಳಗಿನ ಕಾಫಿ ಬೇಕು ಅನ್ನೊ ಚಪಲ. ಆದರೆ ಮಾಡಿ ಕೊಡೋರು ಯಾರು? ನನ್ನ ಹೆಂಡ್ತಿ, ನನಗಿಂತ ವಯಸ್ಸಿನಲ್ಲಿ ಚಿಕ್ಕವಳು. ಅಂದ್ರೆ ನಿದ್ದೆ ಜಾಸ್ತಿ ತಾನೆ? ಎದ್ದಿಲ್ಲ. ಸರಿ, ಇನ್ನು ನನ್ನ ಸೊಸೆ, ಅವಳು ಮತ್ತಷ್ಟು ಚಿಕ್ಕೋಳು. ಅವಳ್ದು ಅರ್ಧ ನಿದ್ರೆ ಸಹ ಮುಗಿದಿಲ್ಲ. ಅವರೆಲ್ಲಾ ಅವರವರ Quota of ನಿದ್ದೆ ಮುಗಿಸಿ, Fundamentals ಮುಗಿಸಿ, ಬಂದು ಕಾಫೀ ಮಾಡೋ ಹೊತ್ತಿಗೆ ಸೋಮವಾರದ ರಾಹುಕಾಲ ಮುಗಿದಿರುತ್ತೆ. ಬಿಡಿ ಇದರ ವಿಷಯ. ಈ ವಿಷಯದಲ್ಲಿ ಸ್ವಾವಲಂಬನೆ, self service ಎ ಮೇಲು. ಕಾಫಿ ಮಾಡ್ಕೊಂಡು ಕುಡಿಯೋ ಹೊತ್ತಿಗೆ ಕೈಲಿ ದೈನಂದಿನ ದಿನಪತ್ರಿಕೆ ಇರಬೇಕು. ಅದು ಬಂದಿಲ್ಲದಿದ್ದರೆ ಏನೋ ಒಂದು ತರಹ ತಹ ತಹ. ಹತ್ತು ಸಲ ಪೇಪರ್ ಬಂತೇನೋ ಅಂತ ಬಾಗಿಲ್ ತೆಗೆದು ನೋಡೋದು. ಆತಂಕ

ಸಹಿಸಲಾರದೆ gate ಹತ್ತಿರ ಹೋಗಿ ನಿಲ್ಲೋದು. ಏನೋ ಒಂದು ತರಹ ಕಾತುರ, expectation ಉ, urgency ಪೇಪರ್ ನೋಡೋಕೆ. ಆ ಪೇಪರ್‌ನಲ್ಲಿ ಏನಿರುತ್ತೆ ಅಂತ ಗೊತ್ತಿದ್ರೂ ಪ್ರತಿದಿನ ಹೀಗೇನೆ. ಈ ಮನಃಸ್ಥಿತಿಗೆ ಏನು ಹೇಳಬೋಕೋ ಆ ದೇವರಿಗೇ ಗೊತ್ತು.

ಕಡೆಗೂ ಬಂದ್ನಪ್ಪಾ ಆ ವಿತರಕ ಸೈಕಲ್ ಮೇಲೆ ದೂರದಲ್ಲಿ. ಅವನ ಕೈಯಿಂದಾನೆ ಇಸ್ಕೊಳ್ಳೋಣ ಅಂತ ದಾರಿಗೆ ಬಂದು ನಿಂತರೆ ಚಾತಕ ಪಕ್ಷಿ ಹಾಗೆ, ಆ ಹುಡುಗ 'ರೊಂಯ್' ಅಂತ ಮನೆಬಾಗಿಲಿಗೆ ಪೇಪರ್ ಎಸೆದು, ನಿಲ್ಲದೇನೇ ಹೋಗೇಬಿಟ್ಟ. ಇನ್ನೇನ್ಮಾಡೋದು, ಎಸೆದ ಪೇಪರ್ನ ಆರಿಸಿಕೊಂಡು, ಆಸೆ ಬುರುಕ ಕಣ್ಣಿನಿಂದ ನೋಡೋಕೆ ಹತ್ದೆ. (ಏನ್ನ, ಹತ್ದೆ ಅಂತ ಕೇಳಬೇಡಿ please) ಹೀಗೆ ಪ್ರತಿದಿನದ ಬೆಳಗಿನ ಪರಿಸ್ಥಿತಿ.

'ಪೇಪರ್ಸ್ ಬಿಚ್ಚಿ ತಲೆ ಬರಹ'ಗಳನ್ನ ನೋಡಿದ ತಕ್ಷಣ, ಐದು ನಿಮಿಷದಲ್ಲಿ ಇದ್ದ ಕಾತುರ, ಆತಂಕ ಎಲ್ಲಾ ತಸ್ ಅಂತ ಇಳಿದು ಹೋಗುತ್ತೆ. ಯಾಕೆಂದರೆ, ನಿನ್ನೆ ಪೇಪರ್‌ಗೂ ಇಂದಿನ ಪೇಪರ್‌ಗೂ ಏನು ಅಂತಹ ವ್ಯತ್ಯಾಸನೇ ಇಲ್ಲ. ಅದೇ ಮಾಮೂಲಿ, ಸಾವು, ಸ್ಟ್ರೈಕು, ಅಪಘಾತ, ನೆಲದಾಟು ಅಂದ್ರೆ floor crossing, (ಕನ್ನಡಕ್ಕಿಂತ, ಇಂಗ್ಲೀಷ್‌ನಲ್ಲೇ ಬೇಗ ಅರ್ಥ ಆಗುತ್ತ ಅಲ್ಲವಾ?) ಸರ್ಕಾರ ರಚನೆ, ಸರ್ಕಾರ ಪತನ, ಲಂಚ, ಬಾಂಬ್ ಸ್ಫೋಟ, ಅವರ್ನ ಇವರು ಬಯ್ಸಿ, ಇವರ್ನ ಅವರು ಬಯ್ಸಿ, ಕಡೆಗೆ ಗೆಲ್ಲಬಹುದಾದ ಆಟದಲ್ಲಿ ನಮ್ಮ ಮಹಾನ್ ಕಲಿಗಳು ಎಂದಿನಂತೆ ಸೋಲೋದು. ಹೇಳಿ, ಇವುಗಳನ್ನು ಬಿಟ್ಟು ಆ ಪೇಪರ್‌ನಲ್ಲಿ ಬೇರೆ ಏನಾದರೂ ಹೊಸ ವಿಷಯ ಇರುತ್ಯೆ? ಈ ಪುರುಷಾರ್ಥಕ್ಕೆ ಪೇಪರ್‌ಗೋಸ್ಕರ ಹಾಗೆ ಕಾಯೋದ್ಯಾಕೆ, ಓದೋದು ಯಾಕೆ? ನಿನ್ನೆ ಪೇಪರ್ನ ಒಂದ್ಸಲ ಬೆಳಿಗ್ಗೆ ಎದ್ದು revise - ಪುನಹ್ ಪಟನ ಮಾಡಬಹುದಲ್ವೆ.

ಈ ಪೇಪರ್‌ನೋರು ಅಷ್ಟೇ. ಮೇಲೆ ಹೇಳಿದ ವಿಷಯ ಎಲ್ಲಾ 'ಮಾಮೂಲಿ, ಎಂದಿನಂತೆ' ಅಂತ ಹೇಳಿ, ಬೇರೆ ಇನ್ನೇನಾದರೂ ಇದ್ದರೆ ಬರೆಯೋದು ವಾಸಿ ಅಲ್ವೆ?

ಈ ದಿನಪತ್ರಿಕೆಯವರೂ ಅಷ್ಟೆ, ಬಹಳ ನಿರಾಶಾವಾದಿಗಳು, negative attitude. ಓದೋರ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ ಮಾಡಿ, ಅವರಿಗೆ ಹೆದರಿಕೆ ಹುಟ್ಟಿಸೋದರಲ್ಲಿ ನಿಸ್ಸೀಮರು. ಬರೆಯೋದೆಲ್ಲ ಬರೀ ಕೆಟ್ಟದ್ದನ್ನೇ.

ನೀವೇ ನೋಡಿ, ಉದಾಹರಣೆಗೆ, - ಬೆಂಗ್ಳೂರ್ನಿಂದ ಮೈಸೂರಿಗೆ ಹೋಗೋ ರಸ್ತೆಯಲ್ಲಿ ನಿನ್ನೆ ಮೂರು ಅಪಘಾತಗಳಾಗಿ, 30 ಜನ ಸ್ಥಳದಲ್ಲೇ ಸತ್ತು, 300 ಜನ ಸಾಯೋ ಹಾಗಿದ್ದಾರೆ ಅಂತ ಹೆದರಿಕೆ ಆಗೋ ಹಾಗೆ ಬರೆಯೋ ಬದಲು, 'ನಿನ್ನೆ

ಬೆಂಗಳೂರಿನಿಂದ ಮೈಸೂರಿಗೆ 1345 ವಾಹನಗಳು ಚಲಿಸಿ, 65,000 ಜನ ಪ್ರಯಾಣಿಸಿ ಸುಖವಾಗಿ ತಲುಪಿದರು. ಅದರಲ್ಲಿ ಕೇವಲ 30 ಜನ ಮಾತ್ರ 3 ಅಪಘಾತದಲ್ಲಿ ಸತ್ತು, 300 ಜನ ಸಾಯ್ತಾ ಇದಾರೆ' ಅಂತ ಬರೆದರೆ, ಮನಸ್ಸಿಗೆ ಎಷ್ಟೋ ನೆಮ್ಮದಿ, ಧೈರ್ಯ ಅಲ್ಲವೆ? ಅಲ್ಲರಿ, 1345 ವಾಹನಗಳಲ್ಲಿ 3 ಅಪಘಾತ 0.22%, 65,000 ಜನರಲ್ಲಿ 330 ಜನ 0.1% ಸತ್ತಿದ್ದು, negligible % ಅಲ್ಲವೆ? ಆದ್ದರಿಂದ ಬೆಂಗಳೂರಿಂದ ಮೈಸೂರಿಗೆ ವಾಹನದಲ್ಲಿ ಚಲಿಸಿದರೆ, 99.99% ಸಾಯ್ದೆ ತಲುಪ್ತೀವಿ. ಇದಕ್ಕಿಂತ ಏನು ಬೇಕು ನಿಮಗೆ?

ಹೀಗೆ 'ಆಶಾದಾಯಕ'ವಾಗಿ neswpaper ನೋರು ಬರೆದರೆ, ಮನಸ್ಸಿಗೆ ಎಷ್ಟೋ ಹಾಯ್, ಅಪಘಾತಗಳ ಹೆದರಿಕೆ ಕಮ್ಮಿಯಾಗಿ ಓಡಾಡೋ ಧೈರ್ಯ ಬರೋಲ್ಲವೆ?

ಹಾಗೇನೇ - ಬೆಂಗಳೂರಿನಲ್ಲಿರುವ 6 ಲಕ್ಷ ಮನೆಗಳಲ್ಲಿ ಕೇವಲ 6 ಮನೆಗಳಲ್ಲಿ ದರೋಡೆಯಾಗಿ, 10 ಲಕ್ಷ ಹೆಂಗಸರಲ್ಲಿ ಕೇವಲ 13 ಚೈನ್ ಸ್ನಾಚಿಂಗ್ ಆಗಿ, 26 ಲಕ್ಷ ಜನರಲ್ಲಿ 19 ಕೊಲೆಗಳಾಗಿವೆ. ಉಳಿದವರೆಲ್ಲಾ ಹಾಯಾಗಿದ್ದಾರೆ ಅಂತ ಬರೆದರೆ, ಬೆಂಗಳೂರಿನಲ್ಲಿ ಇನ್ನೂ ಬದುಕೊ ಸಾಹಸ ಮಾಡಬಹುದಲ್ಲವೆ?

Newspaper ನೋರು ಅವರ ದೃಷ್ಟಿ ಬದಲಾಯಿಸಿಕೊಳ್ಳಬೇಕಾಗಿದೆ. ಆದ್ದರಿಂದಾಗಿ, ಪ್ರಜೆಗಳು ಧೈರ್ಯವಾಗಿ ಸುಖ ಶಾಂತಿಯಿಂದ ಇರಬೇಕಾದರೆ, ಪೇಪರ್ನಲ್ಲಿ, ಒಂದು 40% advertisement ಉ, 40% ರಾಜಕೀಯ ಮತ್ತು ಅದಕ್ಕೆ ಸಂಬಂಧಪಟ್ಟಿದ್ದು, 3% sports ಮತ್ತು ಸಾಂಸ್ಕೃತಿಕ ಚಟುವಟಿಕೆಗಳು, 15% ಕೊಲೆ, ಸುಲಿಗೆ, scandals ಮುಂತಾದವು. ಕೇವಲ 2% ಆಶಾದಾಯಕ ವಿಷಯಗಳಿರುತ್ತೆ. 98% ಓದಲೇ ಬೇಕಾಗಿರುವುದಿಲ್ಲ. 2% ಓದಿದರೆ ಸಾಕು, ಆ 2% ಒಂದ್ಕಡೆ ಹಾಕಿ, ಉಳಿದೆಲ್ಲ ಒಂದ್ಕಡೆ ಹಾಕಿದರೆ, ನಾವು ಬೇಡವಾದ್ದನ್ನು ಓದಿ ತಲೆ ಬಿಸಿ ಮಾಡ್ಕೊಬೇಕಾದ್ದೇ ಇಲ್ಲ, ನಿರಾಶವಾದಿಗಳಾಗಿ, ಹುಚ್ಚಾಸ್ಪತ್ರೆ ಸೇರಬೇಕಾದ್ದಿಲ್ಲ, ನೇಣು ಹಾಕೋಬೇಕಾದ್ದಿಲ್ಲ.

ಇನ್ನು ನಮ್ಮ ವೈಯಕ್ತಿಕ attitude ಕಡೆ ಗಮನ ಹರಿಸೋಣವ? ಪ್ರತಿದಿನ ಸುಮಾರು 6 ಘಂಟೆಗಳ ಕಾಲ power cut ಇರುತ್ತೆ, ಹೇಳಿ, ಹೇಳದೆ. ಅದು ಯಾವುದೋ ಕಾರಣದಿಂದ ಒಂದು ದಿನ 4 ಘಂಟೆಗೆ ಇಳೀತು ಅಂತ ಇಟ್ಕೊಳ್ಳಿ, ಆಗ ನಿಮಗೆ KEB ಮೇಲೆ ಎಲ್ಲಿಲ್ಲದ ಮಮತೆ. ತುಂಬ efficient ಆಗಿದಾರೆ, ಹಾಗೆ ಹೀಗೆ ಅಂತ್ಕೋತೀರ ಅಲ್ಲವ? ಅದೇ positive thinking ಅನ್ನೋದು.

ಊಟಾನೆ ಇಲ್ಲದವನಿಗೆ ನಮ್ಮ ಮಹಾನ್ ಭಾರತದಲ್ಲಿ ಒಂದು ಹೊತ್ತು ಸಿಕ್ರೆ, ಇದೇ ಸ್ವರ್ಗ ಅನ್ನಿಸುತ್ತೆ. ಇದು ನಾವು ನೋಡುವ ರೀತಿ ಮೇಲೆ ಅವಲಂಬಿಸುತ್ತೆ.

ಎಲ್ಲಾ ವಿಷಯಕ್ಕೂ ಗೊಣಗಬಹುದು. Silver liningನ ಹುಡುಕಬೇಕು dark cloudನಲ್ಲಿ. ಆಗ ಮನಸ್ಸಿಗೂ ನೆಮ್ಮದಿ.

ಕೆಟ್ಟದ್ದು ಒಳ್ಳೇದು ಎಲ್ಲಾ ಕಾಲದಲ್ಲೂ ಇದ್ದಿದ್ದೆ. ಕಳ್ಳರು, ಕಾಕರು, ದರೋಡೆಕೋರರು ಎಲ್ಲ ಕಾಲದಲ್ಲೂ ಇದ್ದರು, ಈಗಲೂ ಇದ್ದಾರೆ, ಮುಂದೇನು ಇರ್ತಾರೆ. 1950 ರಲ್ಲಿ ಬೆಂಗಳೂರಿನಲ್ಲಿ ಇಷ್ಟು ಕಳ್ಳರು ಇರಲಿಲ್ಲ. ಆಗ ಕೇವಲ ಅಲ್ಲೋ ಇಲ್ಲೋ ಒಂದೊಂದು ಕಳ್ಳತನ ಆಗ್ತಾ ಇತ್ತು. ಆದರೆ ಈಗ ದಿನಕ್ಕೆ ಹತ್ತು-ಹದಿನೈದು ಆಗುತ್ತೆ. ಕಾರಣ 1950ರಲ್ಲಿ ಬೆಂಗಳೂರಿನ ಜನಸಂಖ್ಯೆ ಎರಡು ಲಕ್ಷ ಮಾತ್ರ ಅನ್ಕೊಳ್ಳಿ. ಆದರೆ ಈಗ 50 ಲಕ್ಷ ಆಗಿದೀಯಲ್ಲ. Ratio ಪ್ರಕಾರ 1950ರಲ್ಲಿ 2 ಕಳ್ಳತನ ಆಗ್ತಾ ಇದ್ದರೆ ಈಗ 50 ಆಗಬೇಕಲ್ಲವೆ? ಆದರೆ, ಆಗ್ತಾ ಇರೋದು ಬರೀ 15 ಮಾತ್ರ. ಅಂದ್ರೆ ನಾವು improve ಆಗಿಲ್ಲವೆ? ನಮ್ಮ 'ಅರಕ್ಷರು' ತುಂಬ ತುಂಬ efficient ಆಗಿದಾರಾ? ಅಥವ ಕಳ್ಳರಿಗೆ ಬೇಜಾರಾಗಿ ಕೆಲಸ ತ್ಯಜಿಸಿದ್ದಾರಾ?

ಆದ್ದರಿಂದ ಕಾಲ ಕೆಡ್ತಾ ಇದೆ ಅಂತ ನಾವು ಅಳಬೇಕಾದ್ದಿಲ್ಲ. ಹಾಗೆ ನೋಡಿದರೆ ಕಾಲ ಒಳ್ಳೇದೇ ಆಗ್ತಾ ಇದೆ proportionately.



''Y2K ಸಮಸ್ಯೆ ಮುಗಿದೇ ಹೋಯ್ತಲ್ಲ, ಇನ್ನು ನಾವಿಬ್ರೂ ಭೇಟಿಮಾಡೋದು ಹೇಗೆ?''

# ತಿಂಮನಿಗೆ ನಮನ

– ಸಂಡೂರು ವೆಂಕಟೇಶ್

ಬೀchi ಎಂಬ ಹೆಸರೊಂದಿಗೆ ಇನ್ನೊಂದು ಹೆಸರೂ ತಳುಕು ಹಾಕಿಕೊಂಡಿದೆ, ಅದು 'ತಿಂಮ'ನದು ಬೀchi ಅವರು ಸೃಷ್ಟಿಸಿದ ಪಾತ್ರ ತಿಂಮ ಎಲ್ಲ ಹಾಸ್ಯಪ್ರಿಯರ ಸ್ವಂತ ''ತಂಮ''

ಒಮ್ಮೆ ತಿಂಮನಿಗೆ ನಿಘಂಟು ಬೇಕಿತ್ತು. ಮೇಸ್ಟ್ರು ಮನೆಗೆ ಹೋಗಿ ಅವರನ್ನು ಕೇಳಿಕೊಂಡ.

''ಆಗಲಿ ತಿಂಮಾ, ಆದ್ರೆ ನೀನು ಅದನ್ನು ಇಲ್ಲೇ ಬಳಸಬೇಕು. ಮನಿಗೆ ಒಯ್ಯಬಾರದು'' ಎಂದರು. ತಿಂಮ ಹಾಗೆಯೇ ಮಾಡಿದ.

ಮುಂದೊಂದು ದಿನ ಮೇಸ್ಟ್ರು ತಿಂಮನ ಮನೆಗೆ ಬಂದು ಕೇಳಿದರು.

''ತಿಂಮಾ, ಸ್ವಲ್ಪ ಕಸಬರಿಗೆ ಬೇಕಿತ್ತಲ್ಲಾ?''

''ಅದಕ್ಕೇನು ಸಾರ್, ಅಗತ್ಯವಾಗಿ ಕೊಡುತ್ತೇನೆ. ಆದರೆ ನೀವದನ್ನು ಇಲ್ಲಿಯೇ ಬಳಸಬೇಕು, ಮನಿಗೆ ಒಯ್ಯಬಾರದು'' ಎಂದ ತಿಂಮ... ಅಷ್ಟೇ!

ಕತ್ತೆಯ ಶ್ರಮದ ದುಡಿತ, ನಾಯಿಯ ಯಜಮಾನನ ಮೇಲಿನ ವಿಶ್ವಾಸ, ಕಾಗೆಯ ಬಂಧು ಪ್ರೇಮಗಳಿಗೆ ಮಾರುಹೋಗಿದ್ದ ಈ ತಿಂಮ ಆ ಪ್ರಾಣಿಗಳಿಗೆ ಕೈ ಮುಗಿದಾಗ ನಗು ಬಂದರೂ; ''ಅರೇ! ಅವನ ಭಾವನೆಗಳು ಎಷ್ಟು ದೊಡ್ಡ ಸತ್ಯದರ್ಶನ ಮಾಡುಸುತ್ತವೆಯಲ್ಲಾ'' ಎನಿಸದೇ ಇರದು.

ತಿಂಮ ಮಂಕುತಿಮ್ಮನನ್ನು ತನ್ನ ಹಿರಿಯಣ್ಣನಂತೆ ಕಂಡವನು. ಬೀchi ತಿಂಮನಿಗೆ ಹೇಳಿದ್ದ ಮಾತನ್ನು ತಿಂಮ ಇಂದಿಗೂ ಮರೆತಿಲ್ಲ.

''ಕಾಲು ಶತಮಾನದ ಹಿಂದೆಯೇ ಕಂಡಿಹೆವು।
ಕೋಲು ಹಿಡಿದಿಹನವನು ಜ್ಞಾನದಂಡ॥
ಎಲ್ಲವನು ಬಲ್ಲ; ಬಲ್ಲವರ ಗುರು ಗುಂಡಪ್ಪ।
ಬಲದೇವ ಮಂಕುತಿಮ್ಮನಿಗೆ ನಮಿಸೊ ತಿಂಮಾ॥''

ಅಣ್ಣ ಮಂಕು ತಿಮ್ಮ

''ನಗುವು ಸಹಜದ ಧರ್ಮ
ನಗಿಸುವುದು ಪರಧರ್ಮ...''

ಎಂದರೆ ತಿಂಮ ಬೇರೊಂದು ಬಗೆಯಲ್ಲಿ ಆರೋಗ್ಯಪೂರ್ಣ ಹಾಸ್ಯದ ಬಗ್ಗೆ ನಮಗೆಲ್ಲ ಹೀಗೆ ಹೇಳುತ್ತಾನೆ -

''ನಗುವಿರಲಿ, ಊಟದಲಿ ಅನುಗಾಲ ರುಚಿಯಿರಲಿ...''

ದಡ್ಡನಾದರೂ ಪ್ರಾಮಾಣಿಕನಾದ, ಸತ್ಯಪ್ರಿಯನಾದ ತಿಂಮ ಹುಟ್ಟಿದ್ದು ಈ ಶತಮಾನದ ನಾಲ್ಕನೆಯ ದಶಕದಲ್ಲಿ ಬೀchi 1913 ರಲ್ಲಿ ಇಲ್ಲಿ ಬಂದು ತಿಂಮನಿಗಾಗಿ ಕಾದು ಕುಳಿತಿದ್ದರು. ಇನ್ನೇನು ತಿಂಮನಿಗೆ ಷಷ್ಠಿಪೂರ್ತಿಯಾಗಲಿದೆ.

ತಿಂಮ - ಬೀchiಯರ ಸ್ನೇಹ ಸಂಬಂಧವು ಅವ್ಯಾಹತವಾಗಿ ನಾಲ್ಕು ದಶಕಗಳಷ್ಟು ಕಾಲ ಸಾಗಿತು.

''ತಿಂಮಾ''

ಎಂದು ಬೀchi ಕೂಗಿ ಕರೆದಾಗಲೆಲ್ಲ -

''ಸ್ವಾಮೀ''

ಎನ್ನುತ್ತ ಎದ್ದು ಓಡೋಡಿ ಬರುತ್ತಿದ್ದ ತಿಂಮನಿಗೆ ಬೀchi ಕಡೆಗೂ ವಿದಾಯ ಹೇಳಿ 7-12-1980 ರಂದು ತಿಂಮನನ್ನು ಇಲ್ಲಿಯೇ ಉಳಿಸಿ, ತಾವೊಬ್ಬರು ಮಾತ್ರಾ ನಡೆದರು ಅದೆಲ್ಲಿಗೋ. ಹೋಗುವಾಗೊಮ್ಮೆ ತಿಂಮನಿಗೆ ಈ ರೀತಿ ಹೇಳಲು ಮಾತ್ರಾ ಮರೆಯಲಿಲ್ಲ -

## ಬಿಡುಗಡೆ

ನೀನು ಕಾಣದ ಕೈ, ಕೈ ಬೀಸಿ ಕರೆಯುತಿದೆ।
ನೀನೆ ಕೇಳದ ದನಿಯು ಸಾಕು ಬಾ ಎನ್ನುತಿದೆ॥
ಆಣತಿಯು ಚಿಂತೆನಗೆ, ನಾನಿಲ್ಲಿ ಇರಲಾರೆ।
ಏನೀಗ? ಹೋದರೆ ಮತ್ತೆ ಬರುವೆನೋ ತಿಂಮ॥

ಎಲ್ಲಿ ಪೋಗುವೆ ನಾನು, ಆ ಗುಟ್ಟನರಿಯೆಯಾ?।
ಅಲ್ಲಿ ಕೆಲಕಾಲ, ಬರುವ ಮತ್ತಿಲ್ಲಿಗೆ॥
ಬಾಳ ಬಯಕೆಯೆ ತಾನು ಮೈ ತಳೆದು ಬರುವುದು।
ಎಳೆ ಶಿಶುವು ತಾಯಿ ತೊಳಲಿ ತಿಂಮ॥

ಕಡೆಯ ಮಿತ್ರನು ಬಂದ, ಬಿಡುಗಡೆಗೆ ಬಂದ।
ಜೋಡಿ ತಪ್ಪಿತು ಎಂದು ದುಸುಮುಸು ಬೇಡ॥
ಒಡೆಯದಿದು; ಇನ್ನೊಬ್ಬ ನಾ ತಿಂಮ, ನೀ ಬೀchi।
ತಡವಾಯ್ತು ಬರುವೆ ನಗು ಒಮ್ಮೆ ತಿಂಮ॥

''ಅಲ್ಲಿ ಕೆಲ ಕಾಲ ಬರುವೆ ಮತ್ತಿಲ್ಲಿಗೆ'' ಎಂಬ ಬೀchi ಅವರ ಭರವಸೆಯನ್ನೇ ನಂಬಿ ಇಲ್ಲಿ ಅವರಿಗಾಗಿ ಕಾದುಕುಳಿತೇ ಇದ್ದಾನೆ... ತಿಂಮ.

# ವೆಬ್ - ಅವತರಣ

– ಪ್ರಕಾಶ್

ಇಳಿದು ಬಾ ತಾಯಿ
ಇಳಿದು ಬಾ
ನಿಗಮ ದೆದೆಯಿಂದ
ತೆರೆಯ ಮರೆಯಿಂದ
ಅಣುಗಳೊಡಲಿಂದ
ಹರಿದು ಬಾ

ಜಾಲ - ಭಕ್ತರನು ತಣಿಸು ಬಾ
ಸಪ್ತ ಸಾಗರಗಳ ದಾಟಿ ಬಾ
ಮೋಡೆಂ ದ್ವಾರವನು ಮೆಟ್ಟಿ ಬಾ
ಇಳಿದು ಬಾ ತಾಯಿ
ಇಳಿದು ಬಾ

ತೆರೆಯ ನಡುವಿಂದ
ಜಿಗಿದು ಬಾ
ಬಲದ ತುದಿ ಮೂಲೆಯಲಿ,
ಕಹಳೆ - ಕಾಲಗಳ ನಡುವೆ
ನಿಲ್ಲು ಬಾ
ಬಾ ತಾಯಿ ಬಾ

ಬೈಟುಗಳ ಹೊಳೆಯನ್ನೆ
ಹರಿಸು ಬಾ

ದಿಗ್ ದಿಗಂತಗಳ ನೆನೆದು,
ಕ್ಷೇತ್ರ ದರುಶನದ ವರವ ತಾ
ಇಳಿದು ಬಾ ತಾಯಿ
ಇಳಿದು ಬಾ

ಜ್ಞಾನ ಸಾಗರವ
ಹರಿಸು ಬಾ
ವಿಶ್ವ ಕೋಶವನೆ
ತೋರು ಬಾ
ಪರಮಾಣು ಅಂಚೆಯನು
ಹಂಚು ಬಾ
ಇಳಿದು ಬಾ ತಾಯಿ
ಇಳಿದು ಬಾ

ನೆಟ್‌ಸ್ಕೇಪ್ ನಾವಿಕನ
ದುಡಿಸು ಬಾ
ಸರ್ಚೆಂಜಿನ್ನುಗಳ ತೆರೆಗೆ ತಾ
ಜ್ಞಾನ ದಾಹವನು ತಣಿಸು ಬಾ
ಬಿಲ್ಗೇಟ್ಸನಾ ಪ್ರಸೂತೆ ಬಾ
ಇಳಿದು ಬಾ ತಾಯಿ
ಇಳಿದು ಬಾ!

# ಫ್ರೀಕೀ ಫೇಬಲ್ಸ್

ಹಲವು ವರ್ಷಗಳ ಹಿಂದೆ ಪಂಚ್ ಪತ್ರಿಕೆಯಲ್ಲಿ ಹಾಂಡಲ್ಸ್‌ಮನ್ ಎಂಬಾತ ಹಾಸ್ಯ ಪ್ರಧಾನವಾದ ಚಿತ್ರಕಥೆಗಳ ಸರಣಿಯೊಂದನ್ನು ಸೃಷ್ಟಿಸಿದ. ಸಾಂಪ್ರದಾಯಿಕ, ಜಾನಪದ ಕಥೆಗಳಿಗೆ ಆಧುನಿಕ ಮೆರಗು ಕೊಟ್ಟು ನಗೆ ಹೊಮ್ಮಿಸುವ ಯತ್ನ ಅದಾಗಿತ್ತು. ಈ ಒಂದು ಹೊಸ ಪ್ರಕಾರವನ್ನು ನಮ್ಮ ಪೌರಾಣಿಕ, ಜಾನಪದ ಕಥೆಗಳಿಗೆ ಒಗ್ಗಿಸಿ ಮುಂದಿನ ಸಂಚಿಕೆಗಳಲ್ಲಿ ಪರಿಚಯಿಸುವ ಉದ್ದೇಶವಿದೆ. ಅಪರಂಜಿಯ ಪುಟಗಳಲ್ಲಿ ಮುಂದೆ ಕಾಣಸಿಗುವ ಸರಕಿನ ಮುನ್ನೋಟವೊಂದನ್ನು ಕೊಡುವ ಉದ್ದೇಶದಿಂದ ಮುಂದಿನ ಪುಟಗಳಲ್ಲಿ "ಮೂಗು" ಎಂಬ ಚಿತ್ರಕಥೆಯನ್ನು ಕನ್ನಡಿಸಿ ಕೊಟ್ಟಿದ್ದೇನೆ. ಓದಿ ನೋಡಿ.

# ಮೂಗು



ಮೂರು ಜನ ಸೈನಿಕರು ಯುದ್ಧಭೂಮಿಯಿಂದ ಬರಿಗೈಯಲ್ಲಿ ಹಿಂತಿರುಗುತ್ತಿದ್ದರಂತೆ.

ಒಂದು ರಾತ್ರಿ ಕಾಡಿನಲ್ಲಿ ಅವರನ್ನು ಯಾರೋ ತಡೆದರು













ಸೈನಿಕರ ಕೀರ್ತಿ ಅರಮನೆ ಮುಟ್ಟಿ, ಅವರಿಗೆ ಅರಮನೆಗೆ ಆಹ್ವಾನ ಬಂದಿತು.



ಗುಂಡು ಹಾಕಿದ ಮೇಲೆ ಸೈನಿಕನ
ನಾಲಿಗೆ ಸಡಿಲ ಆಯಿತು


















# ಒಳ - ನುಗ್ಗಿರಿ - ಸಂದರ್ಶನ

## (WALK - IN - INTERVIEWS)

– ಬಿ.ಎಸ್. ಪ್ರಭಾಕರ್

ಶರವೇಗದಲ್ಲಿ ಪೂರ್ಣಗೊಳ್ಳುತ್ತಿರುವ, ಇಡೀ ಜಗತ್ತಿನಲ್ಲೇ ಮರುಭೂಮಿಯೊಂದರಲ್ಲಿ ಸ್ಥಾಪಿಸಲ್ಪಡುತ್ತಿರುವ ಏಕೈಕ ಸಕ್ಕರೆ ಕಾರ್ಖಾನೆ ''ನಿಂಬಕಂ ಸಕ್ಕರೆ ಕಾರ್ಖಾನೆ'' ಎಂಬುದು ಈಗಾಗಲೆ ಸರ್ವವಿಧಿತವಾದ ಸುದ್ದಿಯಾಗಿದೆ.

ನೂರಾರು ಕೋಟಿ ವೆಚ್ಚದಲ್ಲಿ ನಿರ್ಮಾಣಗೊಳ್ಳುತ್ತಿರುವ ಈ ಹೈಟೆಕ್ ಕಾರ್ಖಾನೆಯಲ್ಲಿ ನೌಕರಿ ಗಿಟ್ಟಿಸಿ ಕೊಳ್ಳಲು ಉತ್ಸಾಹಿ ಯುವಕ ಯುವತಿಯರು ಶಬರಿಯ ತೆರದಿ ಕಾಯುತ್ತಿದ್ದಾರೆ ಎಂದು ತಿಳಿದು ಬಂದಿದೆ.

ನಮ್ಮ ಈ ಜಗದ್ವಿಖ್ಯಾತ ಸಂಸ್ಥೆಯನ್ನು ಸೇರಬಯಸುವ ಅದೃಷ್ಟಶಾಲಿಗಳಲ್ಲಿ ನೀವೂ ಒಬ್ಬರಾಗಬಯಸುವಿರಾ?

(ಅ) ನಿಮಗೆ ಡಯಾಬಿಟೀಸ್ ಇದೆಯಲ್ಲವೆ?

ಈ ವಸ್ತುಸ್ಥಿತಿ ನಮ್ಮ ಸಂಸ್ಥೆಯನ್ನು ಸೇರಬಯಸುವ ಪ್ರತಿಯೊಬ್ಬರಿಗೂ ಇರಲೇಬೇಕಾದ್ದು ಅನಿವಾರ್ಯ. ಮಧುಮೇಹಿಗಳನ್ನೇ ನೇಮಿಸಿಕೊಳ್ಳುವುದರಿಂದ ಸ್ವಲ್ಪ ಮಟ್ಟಿಗೆ ಕಾರ್ಖಾನೆಯಲ್ಲಿ ಉತ್ಪಾದಿಸುವ ಸಕ್ಕರೆ ಅಪವ್ಯಯ ವಾಗುವುದನ್ನು ನಿಯಂತ್ರಿಸಬಹುದು ಎಂದು ನಂಬ ಲಾಗಿದೆ. ಈ ಷರತ್ತನ್ನು ಅನ್ಯಥಾ ಭಾವಿಸಬಾರದೆಂದು ಬೇಡಿಕೊಳ್ಳಲಾಗಿದೆ.

(ಆ) ಬೃಹತ್‌ಮೊತ್ತದ ''ಸ್ಕ್ಯಾಂ''ಗಳಲ್ಲಿ ಸಿಕ್ಕಿಬಿದ್ದು, ಚಾಣಾಕ್ಷತನದಿಂದ ಬಚಾವ್ ಆಗಿ ಹೊರಬಂದಿದ್ದೀರ?

ನಮ್ಮ ಸಂಸ್ಥೆ ''ಸ್ಕ್ಯಾಂ''ಗಳಲ್ಲಿ ವಿಶ್ವದಾಖಲೆ ಸಾಧಿಸಬೇಕೆಂಬುದೇ ನಮ್ಮ ಪರಮ ಗುರಿ.

(ಇ) ಜನಪ್ರಿಯ ಕ್ರೀಡೆಗಳಾದ ಮರಕೋತಿ ಆಟ, ಕಳ್ಳ ಪೋಲೀಸ್ ಆಟ, ಚಿನ್ನಿದಾಂಡು, ಕುಂಟೋಬಿಲ್ಲೆ, ಹುಲಿಕುರಿ ಆಟ, ಚೌಕಾಬಾರ ಇತ್ಯಾದಿ ಕ್ರೀಡೆಗಳಲ್ಲಿ ಅರ್ಜುನ್ ಪ್ರಶಸ್ತಿ ಅಥವ ಚಿನ್ನದ ಪದಕ ಗಳಿಸಿದ್ದೀರ?

(ಈ) ಹುಟ್ಟೂರಿನ ಸುಖ, ಸಂತೋಷಗಳನ್ನು ತೊರೆದು ದೂರದ ಥಾರ್ ಮರುಭೂಮಿಯ ಕಷ್ಟಕಾರ್ಪಣ್ಯಗಳನ್ನು ಎದುರಿಸುವ ಕೆಚ್ಚೆದೆಯವರಾಗಿದ್ದೀರ?

(ಉ) ಯಾವುದಾದರೊಂದು ಪ್ರತಿಷ್ಠಿತ ಕಡೆಯಿಂದ ಶಿಫಾರಸ್ಸಿನ ಪತ್ರದೊಂದಿಗೆ ಸಂದರ್ಶನಕ್ಕೆ ಹಾಜರಾಗಬಲ್ಲಿರಾ?

ಮೇಲಿನ ಈ ಪ್ರಶ್ನೆಗಳಿಗೆ ನಿಮ್ಮ ಉತ್ತರ ''ಹೌದು'' ಎಂದಿದ್ದರೆ ನೀವೂ ಅದೃಷ್ಟಶಾಲಿಗಳೇ ಸರಿ. ಇನ್ನು ತಡವೇಕೆ? ಧೈರ್ಯ ಮತ್ತು ಆತ್ಮವಿಶ್ವಾಸದಿಂದ ಮದವೇರಿದ ಗೂಳಿಯ ತೆರದಿ ''ಒಳ ಸುಗ್ಗಿರಿ ಸಂದರ್ಶನ'' ಪಡೆದು, ಮೃಗಜಲದ ಪ್ರಭಾವಕ್ಕೆ ಒಳಗಾಗಿರಿ.

ನಾವು ಕೆಳಕಂಡ ಯೋಗ್ಯ ನೌಕರರಿಗಾಗಿ ತಪಸ್ಸು ಮಾಡುತ್ತಿದ್ದೇವೆ.

**(A) ಶಾಪ್ ಮೇಲ್ವಿಚಾರಕರು** : ಆರು ಹುದ್ದೆಗಳು
**(Shop Supervisors)**

ವಿದ್ಯಾ ಅರ್ಹತೆ : ಹಳೆಗನ್ನಡದ ವ್ಯಾಕರಣ ಶಾಸ್ತ್ರದಲ್ಲಿ ಪರಿಣಿತಿ ಇರಬೇಕು. ಅಥವಾ
ಬಾಯ್ಲರ್ (ನೀರೊಲೆ ಹಂಡೆ) ಮೇಯಿಂಟೆನೆಸ್ ವಿಷಯದಲ್ಲಿ ಕನ್ನಡ ಪ್ರೈಮರಿ ಮೂರನೆ ತರಗತಿ ಮುಗಿಸಿರಬೇಕು.

ವಯೋಮಿತಿ : 30 ರಿಂದ 35

ಅನುಭವ : ಕನಿಷ್ಟ ಐದು ವರುಷಗಳಷ್ಟು ಕಳ್ಳಭಟ್ಟಿ ತಯಾರಿಕಾ ಸಂಸ್ಥೆಯಲ್ಲಿ ಮೇಲ್ವಿಚಾರಕರಾಗಿ ಸೇವೆ ಸಲ್ಲಿಸಿರಬೇಕು.

ಆದ್ಯತೆ : ಸರ್ಕಸ್ ಕಂಪನಿಗಳಲ್ಲಿ ವಿದೂಷಕನ (ಬಫೂನ್) ಪಾತ್ರ ವಹಿಸುತ್ತಿರುವವರಿಗೆ ಆದ್ಯತೆ ಉಂಟು.

ದಯವಿಟ್ಟು ಗಮನಿಸಿ : ಥಾರ್ ಮರುಭೂಮಿಯಲ್ಲಿ ಉಂಟಾಗುವ ಹವಾಮಾನದ ವೈಪರೀತ್ಯಗಳಿಗೆ ಮೈ ಒಗ್ಗಿಸಿಕೊಳ್ಳಲು ಸಹಾಯವಾಗಲೆಂಬ ಉದ್ದೇಶದಿಂದ ಆಯ್ಕೆ ಆದ ಅಭ್ಯರ್ಥಿಗಳನ್ನು ಎರಡು ವಾರಗಳಷ್ಟು ದಕ್ಷಿಣ ಗಂಗೋತ್ರಿಗೆ ಕಳುಹಿಸಲಾಗುವುದು.

ವೇತನ ಶ್ರೇಣಿ : ಆಯ್ಕೆ ಆದವರಿಗೆ ಮಾತ್ರ ತಿಳಿಸಲಾಗುವುದು.

**(B) ಅಕೌಂಟ್ಸ್ ಕ್ಲರ್ಕ್ಸ್** : ನಾಲ್ಕು ಹುದ್ದೆಗಳು

ವಿದ್ಯಾ ಅರ್ಹತೆ : ಕಾಮರ್ಸ್ ವಿಷಯವನ್ನು ವಿಶೇಷವಾಗಿ

| | | |
|---|---|---|
| | | ತೆಗೆದುಕೊಂಡು ಕನ್ನಡ ಎರಡನೆಯ ತರಗತಿಯ ತನಕ ಓದಿರಬೇಕು. |
| ವಯೋಮಿತಿ | : | 25-30 |
| ಅನುಭವ | : | ಯಾವುದಾದರೊಂದು ಕೈಗಾರಿಕಾ ಸಂಸ್ಥೆಯಲ್ಲಿ ಹಲವಾರು ಸ್ಕ್ಯಾಂಗಳಲ್ಲಿ ಸಕ್ರಿಯ ಪಾತ್ರವಹಿಸಿ ಸಾಕಷ್ಟು ಅನುಭವ ಪಡೆದಿರಬೇಕು. |
| ಆದ್ಯತೆ | : | ಕೈಕಾಲು ಬೆರಳುಗಳ ಸಹಾಯದಿಂದ ಕೂಡಿ ಕಳೆಯುವ ಗಣಿತವನ್ನು ತ್ವರಿತ ಗತಿಯಲ್ಲಿ ಮಾಡಬಲ್ಲವರಿಗೆ ಆದ್ಯತೆ ಕೊಡಲಾಗುವುದು. |
| ವೇತನ ಶ್ರೇಣಿ | : | ಆಯ್ಕೆ ಆದವರಿಗೆ ಮಾತ್ರ ತಿಳಿಸಲಾಗುವುದು. |

| | | |
|---|---|---|
| **(C) ಮೆಯಿಂಟೆನೆನ್ಸ್ ಮೆಕಾನಿಕ್ಸ್** | : | ಮೂರು ಹುದ್ದೆಗಳು |
| ವಿದ್ಯಾ ಅರ್ಹತೆ | : | ಮೆಕಾನಿಕಲ್ ಎಂಜನಿಯರಿಂಗ್ ಸಬ್ಜೆಕ್ಟ್ಸ್ ನೊಂದಿಗೆ ಕನ್ನಡ ಪ್ರೈಮರಿ ಎರಡನೆಯ ತರಗತಿಯನ್ನು ಮುಗಿಸಿರಬೇಕು. |
| ವಯೋಮಿತಿ | : | 25 ರಿಂದ 30 |
| ಅನುಭವ | : | ಛತ್ರಿ ರಿಪೇರಿ, ಕತ್ತರಿ ಚಾಕು ಸಾಣೆ ಹಿಡಿಯುವ ಕಲೆ ತಿಳಿದಿರಬೇಕು. |
| ಆದ್ಯತೆ | : | ಕಲ್ಲು ಬಂಡೆ ಸಿಡಿಸಿ ಚಪ್ಪಡಿ, ಸೈಜ್ ಕಲ್ಲುಗಳನ್ನು ತಯಾರಿಸುವ ಕಸುಬಿನಲ್ಲಿ ಪರಿಣತಿ ಹೊಂದಿರಬೇಕು. ಅಂಥವರಿಗೆ ಆದ್ಯತೆ ಉಂಟು. |
| ವೇತನ ಶ್ರೇಣಿ | : | ಆಯ್ಕೆ ಆದವರಿಗೆ ಮಾತ್ರ ತಿಳಿಸಲಾಗುವುದು |

| | | |
|---|---|---|
| **(D) ಸೆಕ್ಯೂರಿಟಿ ಗಾರ್ಡ್‌ಗಳು** | : | ಎಂಟು ಹುದ್ದೆಗಳು |
| ವಿದ್ಯಾ ಅರ್ಹತೆ | : | ಭಾರತದ ಯಾವುದಾದರೊಂದು ಶಾಸ್ತ್ರೀಯ ನೃತ್ಯ ಕಲೆಯಲ್ಲಿ ಡಿಪ್ಲೊಮೊ ಪಾಸ್ ಆಗಿರಬೇಕು. |
| ವಯೋಮಿತಿ | : | 40 ರಿಂದ 45 |

| | | |
|---|---|---|
| ಅನುಭವ | : | ಬೀಗಗಳನ್ನು ನಕಲಿ ಬೀಗದ ಕೈಯಿಂದ ತೆಗೆಯುವ ಕಲೆಯಲ್ಲಿ ಪರಿಣಿತಿ ಇರಲೇಬೇಕು. ಭೂತ ಪ್ರೇತ, ಕೊಳ್ಳಿದೆವ್ವಗಳನ್ನೂ ಹೆದರಿಸುವಂತಹ ವರ್ಚಸ್ಸನ್ನು ಹೊಂದಿರಬೇಕು. |
| ಆದ್ಯತೆ | : | ಮಾನವ ದೃಷ್ಟಿಯಿಂದ ಈ ವರ್ಗದ ಹುದ್ದೆಗೆ ಮಾಜಿ ರೈಲು ವಾಸಿಗಳಿಗೆ ಹೆಚ್ಚಿನ ಆದ್ಯತೆ ಉಂಟು! ಇರುಳು ಕಣ್ಣು ಇರುವವರಿಗೆ ಇನ್ನೂ ಹೆಚ್ಚಿನ ಆದ್ಯತೆ ಉಂಟು. |
| ವೇತನ ಶ್ರೇಣಿ | : | ಆಯ್ಕೆ ಆದವರಿಗೆ ಮಾತ್ರ ತಿಳಿಸಲಾಗುವುದು. |
| ದಯವಿಟ್ಟು ಗಮನಿಸಿ | : | ಕಾರ್ಖಾನೆ ಸುತ್ತಾ ಹಾವುಗಳ ಕಾಟ ಹೆಚ್ಚಾಗಿರುವುದರಿಂದ ಈ ಹುದ್ದೆಯ ನೌಕರರಿಗೆ ಪುಂಗಿಯನ್ನು ಊದಿ ಹಾವು ಹಿಡಿಯುವ ಕಲೆಯನ್ನು ಕಲಿಸಲಾಗುವುದು. |
| **(E) ಎತ್ತಿನ ಬಂಡಿ ಚಾಲಕರು** | : | ಆರು ಹುದ್ದೆಗಳು |
| ವಿದ್ಯಾ ಅರ್ಹತೆ | : | ವೈಮಾನಿಕ ಶಾಸ್ತ್ರದಲ್ಲಿ ಕನ್ನಡ ಪ್ರೈಮರಿ ನಾಲ್ಕನೆ ತರಗತಿ ಮುಗಿಸಿರಬೇಕು. |
| ವಯೋಮಿತಿ | : | 30 ರಿಂದ 35 |
| ಅನುಭವ | : | ನೂರಾರು ಕಿಲೋಮೀಟರ್ಸ್ ದೂರಕ್ಕೆ ಕಬ್ಬನ್ನು ಹೊತ್ತ ಎತ್ತಿನ ಬಂಡಿಯನ್ನು ಓಡಿಸುವುದರಲ್ಲಿ ಅನುಭವ ಇರಬೇಕು. |
| ವೇತನ ಶ್ರೇಣಿ | : | ಆಯ್ಕೆ ಆದವರಿಗೆ ಮಾತ್ರ ತಿಳಿಸಲಾಗುವುದು. |

ಸಂದರ್ಶನದ ದಿನ ಮತ್ತು ವೇಳೆಯನ್ನು ಪ್ರಕಟಿಸಲಾಗುವುದು.

ನಮ್ಮ ವಿಳಾಸ:

**ನಿಂಬಕಂ ಸಕ್ಕರೆ ಕಾಂಪ್ಲೆಕ್ಸ್**

ನಂ. 420, 3ನೇ ಕ್ರಾಸ್ ಮೆಯಿನ್ ರೋಡ್

ವೀರಪ್ಪನ್‌ನಗರ, ಸಿಂಗ್ಲೀಕ,

ಭಾರತ.

# ಬೀಚಿಯೊಡನೆ ಒಂದು ಸರಸ ಸಂವಾದ!

ಹಾ. ರಾ.

''ಓ.. ಬೀಚಿ!... ನಮಸ್ಕಾರ ಸಾರ್''

''ನಮಸ್ಕಾರ''

''ಎಷ್ಟು ವರ್ಷ ಆಯ್ತು ನಿಮ್ಮನ್ನ ನೋಡಿ''

''ನಾನೂ ಅದನ್ನೆ ಹೇಳ್ಬೇಕು ಅಂತಿದ್ದೆ, ನನ್ನ ಗುರ್ತು ಸಿಕ್ಕಿತೋ ಇಲ್ವೊ''

''ನೀವು ಸ್ವಲ್ಪವೂ ಚೇಂಜ್ ಆಗಿಲ್ಲ ಸಾರ್, ಅದೇ ಪೈಜಾಮ, ಅದೇ ಜುಬ್ಬ, ಕ್ರಾಪು''

''ಅಂದ ಹಾಗೆ... ತಿಂಮ ಎಲ್ಲಿ ಸಾರ್?''

''ಇಲ್ಲೇ ನಿಂತಿದಾನಲ್ಲ! ಅವನು ಈಗ ನಿಮ್ಮ ಕಣ್ಣಿಗೆ ಕಾಣುಸಲ್ಲ''

''ನೀವು ಲಾ ಕಾಲೇಜಿನಲ್ಲಿ ಮಾಡಿದ ಭಾಷಣ ಇನ್ನೂ ಚೆನ್ನಾಗಿ ಜ್ಞಾಪಕ ಇದೆ ಸಾರ್''

''ಹೇಗಿದೆ ಲಾ ಕಾಲೇಜು?''

''ಈಗ ಊರು ತುಂಬ ಲಾ ಕಾಲೇಜುಗಳು ಸಾರ್, ಲಾ, ಲಾ, ಎಲ್ಲೆಲ್ಲೂ ಲಾ... ಬಾರ್ಲ, ಹೋಗ್ಲ, ನೋಡ್ಲ, ಬಾರ್ ಅಟ್ಲ!''

''ನಿಂತೇ ಇದೀರಲ್ಲ, ಒಂದು ಕಪ್ ಕಾಫಿ ಕುಡಿದು ಮಾತಾಡೋಣ, ಪಕ್ಕದಲ್ಲೇ ಇದೆ ವಿಜಯವಿಹಾರ್ ಹೋಟಲು''

''ಏನು... ಕಾಫಿಯೆ?''

''ಸ್ವರ್ಗದಲ್ಲಿ ಅಮೃತ ಕುಡಿದೂ ಕುಡಿದೂ ನಿಮಗೆ ಬೇಜಾರಾಗಿದೆ ಅಂತ ಕಾಫಿ ಹೇಳ್ದೆ ಸಾರ್!''

''ಯಾಕ್ಸಾರ್, ಏನೋ ಯೋಚನೆ ಮಾಡ್ತಾ ಇರೋ ಹಾಗಿದೆ?''

''ಬೆಲೆಗಳು ಇಷ್ಟೊಂದು ವಿಪರೀತವಾಗಿ ಏರಿ ಹೋಗಿದೆಯಲ್ಲ! ನೀವೆಲ್ಲ ಹೇಗ ಬದುಕುತ್ತೀದಿರೋ ಪಾಪ! ನಿಮ್ಮ ಹಿತ ಚಿಂತನೆ ಅಷ್ಟೆ!''

''ಅರ್ಥವಾಯ್ತು ಬಿಡಿ! ನಿಮಗೆ ಜ್ಞಾಪಕ ಇದ್ಯೆಸಾರ್, ನೀವು ಕರ್ನಾಟಕದ ಮುಖ್ಯಮಂತ್ರಿಯಾಗಿ ಆಡಳಿತ ನಡೆಸಿದ್ದು.''

''ನಾನು ಯಾವಾಗ ಮುಖ್ಯಮಂತ್ರಿಯಾಗಿದ್ದನಯ್ಯ''

''ಬೇಂದ್ರೆಯವರು, ಕೃಷ್ಣರಾಯರು ಆದಮೇಲೆ ಸಾರ್ ದೀಪಾವಳಿ ಸಂಚಿಕೆಗಳು ಈಗಲೂ ನಮ್ಮ ಬಳಿ ಇವೆ''

''ಇರಬಹುದು. ನನ್ನ ಆಡಳಿತದಲ್ಲಿ ಜನಗಳು ಸುಖವಾಗಿರಲಿಲ್ವೆ, ಮುಖ್ಯ ಮಂತ್ರಿಯಾಗುವವನು ಧೈರ್ಯವಾಗಿ ಸಮಸ್ಯೆಗಳನ್ನು Solve ಮಾಡ್ಬೇಕು!''

''ಮಾಡಬೇಕು ಸಾರ್, ಆದ್ರೆ ನೀವು ಮಾಡಿದ್ದೇನು? ಕುಡ್ಯೋಕೆ ನೀರು ಸಿಗ್ತಿಲ್ಲ ಅಂತ ಜನರು ಬೊಬ್ಬೆಯಿಟ್ಟಾಗ...''

''ಏನು ಮಾಡಿದೆ, ನೀರು ಸಿಕ್ಕದೆ ಹೋದರೆ ಸೋಡ ಕುಡಿಯರಿ, ಬೀರ್ ಕುಡಿಯರಿ ಎಂದೆ''

''ಅನ್ನ... ಅನ್ನ ಅಂತ ಕಂಗಾಲಾಗಿ ಕಡುಬಡವರು ಬೇಡಿಕೊಂಡಾಗ ಮುಖ್ಯಮಂತ್ರಿಯಾಗಿದ್ದ ನೀವು ಏನು ಸಲಹೆ ಕೊಟ್ರಿ ಹೇಳಿ!''

''ಎಲ್ಲಾ ದೇಶಗಳಲ್ಲೂ ಅನ್ನವನ್ನೇ ತಿಂದು ಬದುಕ್ತಿದಾರೋ... ಅನ್ನವಿಲ್ಲದಿದ್ದರೆ ಬ್ರೆಡ್ ತಿನ್ನಿ, ಜಾಮ್ ತಿನ್ನಿ, ಬಾದಾಮಿ ಹಲ್ವ ತಿನ್ನಿ, ಆಮ್ಲೆಟ್ ತಿನ್ನಿ, ಚಿಕನ್‌ಪಲಾವ್ ತಿನ್ನಿ ಅಂತ ಪರಿಹಾರ ಸೂಚಿಸಿದೆ, ಜನರು ಹೇಗೋ ಬದುಕಿಕೊಂಡರೋ ಇಲ್ವೊ?''

''ಹೌದು! ನಕ್ಕು ನಕ್ಕು ಹೊಟ್ಟೆ ಹುಣ್ಣು ಮಾಡಿಕೊಂಡರು ಅಷ್ಟೆ! ಆಮೇಲೆ ಅವರಿಗೆ ಅನ್ನವೇ ಬೇಕಾಗಲಿಲ್ಲ!''

''ಕನ್ನಡ ಸಮಸ್ಯೆ ಬಗೆಹರಿಯಿತೋ ಇಲ್ಲವೋ! ಯಾವ ಮುಖ್ಯಮಂತ್ರಿಯೂ ಈವರೆಗೆ ಅಷ್ಟನ್ನು ಮಾಡಲಿಲ್ಲ! ಅಧಿಕಾರ ಕೈಲಿದ್ದಾಗ ಬಡವರಿಗೆ ಅನ್ಯಾಯ ಮಾಡಬಾರದು. ನಾವು ಏನು ತಿನ್ನುತ್ತೇವೆಯೋ, ಕುಡಿಯುತ್ತೇವೆಯೋ ಅದು ಅವರಿಗೂ ಸಿಗುವಂತಾಗಬೇಕು!''

''ಹೋಗಲಿ ಬಿಡಿ, ಬಳ್ಳಾರಿಗೆ ಹೋಗಿದ್ದರ?''

''ಹೋಗಿದ್ದೆ! ಎಣ್ಣೆ ಬರುವ ಹೊತ್ತಿಗೆ ಕಣ್ಣು ಮುಚ್ಚಿಕೊಂಡರಿ'' ಎಂದ್ರು

''ಚುನಾವಣೆಗೆ ನಿಲ್ಲಿಸಬೇಕು ಅಂತ ಇದ್ದರೇನೋ!''

''ನನಗೆ ಯೋಗ್ಯ ಪ್ರತಿಸ್ಪರ್ಧಿ ಇದ್ದಿದ್ದರೆ ಮಾತ್ರ ನಿಂತ್ಕೊಳ್ತಿದ್ದೆ! ನಮ್ಮೂರಿಗೆ ಮೂವತ್ತು ಕೋಟಿ ರೂಪಾಯಿ ಸಿಕ್ಕಿದ ಸುದ್ದಿ ಕೇಳಿದೆ!''

''ನಿಮಗೆ ಸಂತೋಷವೆ ಸಾರ್?''

''ಸ್ವದೇಶೋ ಭುವನತ್ರಯಂ!''

''ಅದರರ್ಥ?''

''ನಮ್ಮನೇಲಿ ಈಗ ಒಬ್ಬೊಬ್ರು ಒಂದೊಂದು ಪಾರ್ಟಿಸೇರಿ ಚುನಾವಣೆಗೆ ನಿಂತಿದಾರೆ, ಯಾವದೆ ಪಾರ್ಟಿ ಅಧಿಕಾರಕ್ಕೆ ಬಂದ್ರೂ ನಮ್ಮನೇಲಿ ಒಬ್ಬ ಮಂತ್ರಿ ಇರ್ತಾನೆ - ಮೂವತ್ತು ಕೋಟಿ ಬಿಡುಗಡೆಯಾಗೋ ಹೊತ್ಗೆ!''

''ಬಳ್ಳಾರಿಲಿ ಯಾರ್‍ಯಾರು ಸಿಕ್ಕಿದ್ರು?''

''ಮೂರು ನಾಲ್ಕು ಜನ ಬುಕ್ ಸೇಲರ್ಸ್‌ಗೆ ಪುಸ್ತಕ ಕೊಟ್ಟಿದ್ದೆ ಮಾರಾಟಕ್ಕೆ, ಹಣಬಂದಿರಲಿಲ್ಲ. ರಿಟರ್ನ್ ತಗೋ ಅಂತ ತಗಾದೆ ಮಾಡ್ತಿದ್ರು. ಏನಾದ್ರೂ ಹಣ ಕೊಟ್ರೆ ಇಲ್ಲಿಯ ಖರ್ಚಿಗಾಗುತ್ತೆ ಅಂತ ಅವರ್‍ನ ಕಂಡಿದ್ದೆ. Currency Exchange Problem ಇರೋದಿಲ್ಲ ನೋಡು!''

''ಅದು ಜೋಕು ಸಾರ್! ನಿಮ್ಮ ಪುಸ್ತಕ ಒಂದೊಂದೂ ಏಳು, ಎಂಟು Edition ಗಳಾಗಿವೆ. ಹಾಸ್ಯಾಭಿಮಾನಗಳಿಗೆ ಇದು ಹೆಮ್ಮೆ ವಿಷಯ. ಜನಗಳಿಗೆ ಹಾಸ್ಯದ ಹುಚ್ಚು ಹಿಡಿಸಿದವರು ನೀವು. ಜನಪ್ರಿಯ ಹಾಸ್ಯಸಾಹಿತಿ ಎಂದ್ರೆ ನೀವು.''

''ಎದುರಿಗೆ ಬಂದ್ರೆ ಹೊಗಳೊ ಪರಂಪರೆ ನಿಮ್ಮದು. ಆ ಕೀರ್ತಿ ಎಲ್ಲಾ ಊರುಗಳ ಕತ್ತೆ, ನಾಯಿ, ಕಾಗೆಗಳಿಗೆ ಸಲ್ಲಬೇಕಷ್ಟೆ! ಅವೇ ನನ್ನ ಗುರುಗಳು!''

''ನಿಮ್ಮ 'ಹುಚ್ಚು-ಹುರುಳು' ನನಗೆ ಅರ್ಥವಾಗಿದೆ. ಆದ್ರೂ ನಿಮ್ಮ ಹಾಸ್ಯ ಚಿಕಿತ್ಸಾ ವಿಧಾನದ ರಹಸ್ಯವನ್ನು ನಿಮ್ಮ ಬಾಯಿಂದ್ಲೆ ಇನ್ನೊಮ್ಮೆ ಕೇಳಬೇಕು ಅಂತ ಆಸೆ.''

''ತಿಂಮ ಸಮಾಜದ ನಾಯಿಕಣಪ್ಪ. ಅವನು ಇಡೀ ಸಮಾಜವನ್ನೇ ನೆಕ್ತಾನೆ - ತನ್ನ ಉರುಟು ನಾಲಿಗೆಯಿಂದ. ಗಾಯ ಇದ್ದವ್ರಿಗೆ ನೋವಾಗ್ಬಹುದು, ಗುಣವೂ ಆಗ್ಬಹುದು. ಸಾಕಿದ್ನಾಯಿ ಅಂತ ಎಲ್ಲಾದಕ್ಕೂ ಬಾಲ ಆಡಿಸ್ತಿದ್ರೆ ಬಾಲಕ್ಕೇನ್ಬೆಲೆ? ಸುಳ್ಳುತನ ಕಂಡ್ರೆ ಬೊಗಳ್ಬೇಕೋ ಬೇಡ್ವೋ - ಕಳ್ಳತನ ಕಂಡ್ರೆ ಕಚ್ಚಬೇಕೋ ಬೇಡ್ವೋ!''

''ನಿಮ್ಮ 'ದಾಸಕೂಟ,' 'ಖಾದಿ ಸೀರೆ' ಈ ಕೆಲ್ಸ ಮಾಡ್ತು ಅಂತ ಕೇಳಿದೇನೆ ನಿಜವೆ ಸಾರ್.''

''ಹೌದು. ಅವನ್ನು ಬರೆದು ಪ್ರಕಟಿಸಿದ ಮೇಲೆ ಕೆಲವರು ನನ್ನ ಮೇಲೆ ಗುರ್ ಎಂದ್ರು. ಕೇಳಿದಾಗ ನಕ್ಕೆ. ಆಮೇಲೆ ಅವರೇ ಭೇಷ್ ಎಂದ್ರು! ಅಕಸ್ಮಾತ್ ಇತರರಿಗೆ ನಮ್ಮ ಕಾಲು ತಾಕಿದ್ರೆ ಕೈಯಿಂದ ಅವರ್‍ನ ಮುಟ್ಟಿ ಕಣ್ಣಿಗೆ ಹಚ್ಕೊಳ್ಳೊದು ನಮ್ಮ ಸಂಸ್ಕೃತಿ, ಸಂಪ್ರದಾಯ. ಇತರರ ಮನಸ್ಸನ್ನು ನೋಯ್ಸೋ ಹಾಸ್ಯವನ್ನು ಸೃಷ್ಟಿಸಬಾರದು ಅಷ್ಟೆ!''

''ಹಾಸ್ಯದಲ್ಲಿ ಇಷ್ಟೊಂದು ಕೋಮಲವಾದ ನೀವು ಉಳಿದ ರಸಾತ್ಮಕ ಲೇಖನಗಳಲ್ಲಿ ಇಷ್ಟೊಂದು ನಿಷ್ಠುರ ಹೇಗಾದ್ರಿ ಅಂತ ಕೇಳಿದರಲ್ಲ ಪ್ರೊ।। ಗೋಕಾಕರು - ನಿಮ್ಮ 'ಸರಸ್ವತಿ ಸಂಹಾರ' ಓದಿ. ನಿಮಗೇನನ್ನಿಸಿತು?''

''ಗುರುಗಳ ಆಶೀರ್ವಾದ ಎಂದೆನಿಸಿತು. ಸ್ವೀಕರಿಸಿ ನಗುತ್ತ ಮುನ್ನಡೆದೆ. ನನ್ನ ಧರ್ಮ ನನಗೆ. ನಾವು ಓಡಿಸಬೇಕಾದ್ದು ನಮ್ಮೂರ ಕಳ್ಳನನ್ನಲ್ಲ, ನಮ್ಮೆಲ್ಲರಲ್ಲಿರೋ ಕಳ್ಳತನಾನ!''

''ಕ್ಷಮಿಸಿ ಸಾರ್, ನಿಮ್ಮನ್ನು ಏನೇನೋ ಕೇಳ್ತಿದೀನಿ, ನಿಮ್ಮ ಒಂದು ಹಾಸ್ಯಪುಸ್ತಕಕ್ಕೆ 'ಚಿನ್ನದ ಕಸ' ಅಂತ ಹೆಸರಿಟ್ಟಿರಿ ಕಾರಣ ಏನು ಸಾರ್?''

''ಹಾಸ್ಯ ಕಸಕ್ಕೆ ಸಮಾನ ಅಂತ ಹಿಂದಿನಿಂದ಼್ೂ ಕೆಲವರು ಹೇಳ್ತಾನೇ ಇದ್ರು; ಅದು ಸಾಹಿತ್ಯವೇ ಅಲ್ಲ ಅಂತಾನೂ ಕೆಲವರ ಅಭಿಪ್ರಾಯ. ಅದಕ್ಕೆ ಆ ಕಸವನ್ನು ಚಿನ್ನದ ಕಸ ಅಂತ ಕರೆದೆ ಅಷ್ಟೆ! ಆಗಲಾದ್ರೂ ಮೂಲೇಗೆ ತಳ್ಳಿ ಗುಡ್ಡೆಮಾಡದೆ ಓದಬಹುದು ಜನ ಅಂತ! ಈಗ ಹಾಸ್ಯ ಪುಸ್ತಕಕ್ಕೆ ಡಿಮ್ಯಾಂಡ್ ಬಂದಿದೆಯಂತಲ್ಲ!''

''ಹೌದು ಸಾರ್, ಈಗ ಹಾಸ್ಯ ಬರಹಗಳ ಪುಸ್ತಕ ಹೆಚ್ಚು ಹೆಚ್ಚು ಪ್ರಕಟವಾಗುತ್ತಿವೆ. ಹಾಸ್ಯವನ್ನು ಜನಪ್ರಿಯಮಾಡಿ ಅದಕ್ಕೆ ಒಂದು ಸ್ಥಾನ ಸಿಗುವಂತೆ ಮಾಡಿದ್ರಿ.''

''ಕನ್ನಡಿಗರು ನಗುಬಲ್ಲ ಮನಸ್ಸುಳ್ಳವರು. ನಕ್ಕು ಬಾಳನ್ನು ಹಗುರಮಾಡಿಕೊಂಡು ಬದುಕುವ ಗುಟ್ಟು ಅವರಿಗೆ ಗೊತ್ತು.''

''ಹಾಸ್ಯ ಸಾಹಿತಿಗೆ ಜ್ಞಾನಪೀಠ ಪ್ರಶಸ್ತಿ ಎಂದಾದರೂ ಸಿಗಬಹುದು ಸಾರ್?''

''ಏನಯ್ಯ ಇದು, ಸರಕಾರೀ ಶಂಖ. ಪ್ರೆಸ್ ಕಾನ್ಫರೆನ್ಸ್‌ನಲ್ಲಿ ಕೇಳೋಹಾಗೆ ದಡ್ಡ ಪ್ರಶ್ನೆ ಹಾಕ್ತೀಯ! Wait and Hope!''

''ಇನ್ನೊಂದೇ ಒಂದು ಪ್ರಶ್ನೆ ಸಾರ್, ಬಡಸಾಹಿತಿಗಳ ತಲೆ ತಿನ್ನುತ್ತಿರುವ ಪ್ರಶ್ನೆ - ಅದೇ ಕೃತಿಚೌರ್ಯದ ಬಗ್ಗೆ?''

''ಎಂಥ ಪ್ರಶ್ನೇ ಇದು, ಮಾಡೋದು ಮಾಡ್ಬಿಟ್ಟು! ಎಲ್ಲಿಂದ ಕದ್ದೆ ಎಂದ್ರೆ ಹೇಳೋದೇನು. ಇನ್ನಷ್ಟು ನಗಬೇಕು ಅಷ್ಟೆ! ಉಳಿದಿದನ್ನೆಲ್ಲ ಎಲ್ಲಿಂದ ಕದ್ದೆವೋ ಅದನ್ನೂ ಅಲ್ಲಿಂದಲೆ! ಕದಿಯೋದೆಲ್ಲಿಂದ. ಮೇಲೆ ಮುಗಿಲಿದೆ, ಎತ್ತಿ ನೋಡಲು ತಲೆ ಇದೆ. ಎಲ್ಲಾ ಜೋಕುಗಳೂ ಎಲ್ಲರವು, ಮುಖ್ಯವಾಗಿ ನಕ್ಕವರವು. ಮೊನ್ನೆ ಕೈಲಾಸದ ನನ್ನ ಗಿರಿಧಾಮಕ್ಕೆ Y.N.K. ಬಂದಿದ್ದರು. ಅವರೂ ಹೀಗೇ ಹೇಳಿದರು - original ಅಂತ ಎಲ್ಲಿದೆ. ನೋಡಿದ್ದನ್ನ, ಕೇಳಿದ್ದನ್ನ ಸೊಗಸಾಗಿ ತಿರಿಚಿ ಹೇಳೋದ್ರಲ್ಲೇ ಇದೆ ಪ್ರತಿಭೆ, ಹೊಸತನ ಅಂತ! ಇದೆಲ್ಲ ಕೃತಿಚೌರ್ಯ ಅಂತ ಹೇಳೋದು ಹ್ಯಾಗೆ...

ನಾನು ಇನ್ನು ಹೊರಡ್ತೇನೆ... ಥೇಂಕ್ಸ್.... ಹಾ.ರಾ.''

''ಸಾರ್, ಸಾರ್, ಇನ್ನೊಂದೇ ಒಂದು ನಿಮಿಷ. ಮುಖ್ಯವಾಗಿ ನಾನು ಏನು ಕೇಳ್ಬೇಕು ಅಂತ ಇದ್ದೊ ಅದನ್ನೇ ಮರತುಬಿಟ್ಟೆ. ನಮ್ಮೂರಲ್ಲಿ ಹಾಸ್ಯೋತ್ಸವ ಮಾಡ್ತಿದೀವಿ ನಿಮ್ಮ ನೆನಪು ಮಾಡ್ಕೊಂಡು. ನಮ್ಮ ಹಾಸ್ಯ ಬರಹಗಾರರಿಗೆ ಏನಾದರೊಂದು ಕಿವಿ ಮಾತು ಹೇಳಿ ಸಾರ್?''

''ಮಾನವರೇ ಹೀಗೆ. ಕಿವಿ ಇದೆ ಅಂತ ಜಂಬ ಕೊಚ್ಚುಕೊಳ್ತಾರೆ, ಆದರೆ ಕೇಳಬೇಕಲ್ಲ!... ಮೊನ್ನೆ ಯಮಧರ್ಮನ factory ಸಭಾಂಗಣದಲ್ಲಿ ಚಿತ್ರಗುಪ್ತರ ಸಮ್ಮೇಳನವಾಯಿತು. ಹಾಸ್ಯ ಕವಿಗೋಷ್ಠಿಯೂ ಇತ್ತು. ಒಂದು ಚುಟುಕ ಹೇಳಬೇಕೆಂದು ಯಮಧರ್ಮನ ಆಜ್ಞೆಯಾಗಿತ್ತು. ಹೋಗಿ ಹೇಳಿದೆ. ಅರ್ಥವಾಗದ, ನಗಲಾಗದ ದರಿದ್ರ ಚುಟುಕ ಅದು! ಅಲ್ಲಿ ಸೇರಿದ್ದವರೆಲ್ಲ ಅದನ್ನು ಕೇಳಿ ಗಹಗಹಿಸಿ ನಕ್ಕಿದ್ದಲ್ಲದೆ ಇಷ್ಟು ಹೊತ್ತಾದರೂ ನಗುವನ್ನು ನಿಲ್ಲಿಸಲೇ ಇಲ್ಲ! ಅಧ್ಯಕ್ಷರ ಅಪ್ಪಣೆಯಾದ ಮೇಲೆ ನಗುವನ್ನು ನಿಲ್ಲಿಸಿದರು ಅಷ್ಟೊಂದು ಚೆನ್ನಾಗಿತ್ತೆ ಅದು ಅಂತ ಅವರನ್ನು ಕೇಳಿದೆ. ಅರ್ಥವಾಯಿತೆ? ಎಂದೆ. ಅಯ್ಯೋ, ಅದರರ್ಥ ಕಟ್ಟಿಕೊಂಡು ನಮಗೇನು, ನೀವು ಇನ್ನೊಂದು ಚುಟಕ ಎಲ್ಲಿ ಹೇಳಿಬಿಡುತ್ತೀರೋ ಅಂತ ನಾವು ನಗುವನ್ನು ನಿಲ್ಲಿಸಲೇ ಇಲ್ಲ ಅಂತ ಅಲ್ಲಿದ್ದವರೆಲ್ಲ ನಗು ನಗುತ್ತಾ ಹೇಳಿದರು. ಹಾಸ್ಯಬರಹಗಾರರು ಇದರಿಂದ ಕಲಿಯುವ ಪಾಠ ತುಂಬಾ ಇದೆ.''

ಅಂತ ಅರ್ಧಂಬರ್ಧ ಹೇಳ್ತಾ ಹೇಳ್ತಾ ಒಂದು ಸಿಗರೇಟ್ ಹಚ್ಚಿ ಬೀಚಿ ಜನಜಂಗುಳಿ ಮಧ್ಯೆ ಬೆರತು ಹೊರಟೇ ಹೋದರು. ಎಲ್ಲಿ ಮಾಯವಾಗಿಬಿಟ್ಟರೋ ಆ ಪರಶಿವನಿಗೇ ಗೊತ್ತು. ಬೀಚಿ... ಬೀಚಿ... ಅಂತ ನಾನು ಕೂಗ್ತಾನೆ ಇದ್ದೆ...

**ಮೆಚ್ಚುಗೆ**

ಅಪರಂಜಿ ಯಂಚಿನಾ ವ್ಯಂಗ ಚಿತ್ರಗಳೆನಗೆ
ತಂದ ಸಂತಸವೇನು ಕೊಂಚ ಕೊಂಚೆ?
ಲಕ್ಷ್ಮಣನ ಮೂಗನ್ನು ಇಂಚಿಂಚು ಇಳಿಸಲೆನೆ
ಹೊಸಬರಿವರೆಲ್ಲರೂ ಹಾಕಿದಾ ಸಂಚೆ?
ಏನೇ ಹೇಳಿರಿ ನೀವು ಹಳೆ ರುಚಿಯ ಸವಿದೆನಗೆ
ಅಂದಿಗೂ ಇಂದಿಗೂ ಮುಂದೆ ಎಂದೆಂದಿಗೂ ಪಂಚು ಪಂಚೆ!

– ಶೀನೂ

# ಹಾಸ್ಯ ಸಾಹಿತ್ಯದ ಆರ್ಥಿಕ ಆಯಾಮ

– ಅ.ರಾ.ಸೇ

ಮುಂದಿನ ತಲೆಮಾರು ಯುವಕರದು. ನಮಗೆ ಯುವ ಪೀಳಿಗೆಯಲ್ಲಿ ತುಂಬು ಭರವಸೆಯಿದೆ. ಏಕೆಂದರೆ ನಾವು ಯುವಕರಾಗಿದ್ದಾಗ, ಹಿರಿಯರು 'ಇವು ಏನು ಬಾಳುವೆ ಮಾಡುತ್ತವೆಯೋ, ದ್ರಾಬೆಗಳು' ಎನ್ನುತ್ತಿದ್ದರು. ನಾವು ಸಾಕಷ್ಟು ಚೆನ್ನಾಗಿ ಬಾಳುವೆ ಮಾಡುತ್ತಿಲ್ಲವೇ? ಇಂದಿನ ಯುವಕರು ಎಂತಹವರೇ ಆಗಿದ್ದರೂ 'ಸಾ, ನಿಮ್ಮ ವಯಸ್ಸಿನಲ್ಲಿ ನಾವು ಇರುತ್ತೇವೆಯೋ, ಉರಿದು ಹೋಗಿ ಬಿಟ್ಟಿರುವೆವೋ' ಎಂದು ಆಗಾಗ ಹೇಳುತ್ತಾ ಇರುತ್ತಾರೆ. ಇಂತಹ ಮಾತಿನಲ್ಲಿ ಗಮನಿಸಬೇಕಾದ ಎರಡು ಅಂಶಗಳಿವೆ.

೧. ಇಂದಿನ ಯುವಕರಿಗೆ ತಮ್ಮ ಹಿರಿಯರಲ್ಲಿ, (ತುಟಿಯ ತುದಿಯದಾದರೂ) ಗೌರವವಿದೆ.

೨. ತಾವು ನಡೆಸುತ್ತಿರುವ ಜೀವನ ವಿಧಾನದಲ್ಲಿ (ಅದನ್ನು ಬಿಡಲು ಅವರಿಗೆ ಇಷ್ಟವಿಲ್ಲದಿದ್ದರೂ) ಅಷ್ಟೇನೂ ಹೆಚ್ಚಿನ ನಂಬಿಕೆ ಇಲ್ಲ.

ಇಂದಿನ ಯುವಕರಿಗೆ ನಮಗಿದ್ದ ಒಂದು ಸೌಲಭ್ಯವಿಲ್ಲ ಹಾಗೆಯೇ ನೆನಪಿಸಿಕೊಂಡರೆ 'ಏನೋ, ನಿನಗೆ ಇಂಜಿನಿಯರಿಂಗ್ ಸೀಟ್ ಕೊಡಿಸೋಣವೇ' ಎಂದೊಬ್ಬರು ಹೇಳಿದಾಗ 'ಬೇಡ' ಎಂದು ನೆನಪಿಗೆ ಬರುತ್ತದೆ. ಇಂದು ಹಾಗೆ ಹೇಳಬೇಕಾದರೆ ಹದಿನೈದೋ ಇಪ್ಪತ್ತೋ ಲಕ್ಷ ರೂಪಾಯಿ ತಿಪ್ಪೆಗೆ ಎಸೆಯುವ ಗಂಡಸುತನ ಇರಬೇಕು. ಸೀಟು ಸಿಕ್ಕಿತು ಎನ್ನೋಣ; ಓದಲು ಇನ್ನೆಷ್ಟು ಲಕ್ಷ? ಪಾಸಾಗಲು ಮತ್ತೆಷ್ಟು ತರಬೇಕು?

ಎಂದರೆ ಈಗ ಏನು ಮಾಡಲೂ ರೊಕ್ಕಬೇಕು. ಯಾವಾಗಲೂ ಹೀಗೆಯೇ ಇತ್ತು ಎಂದು ವಾದಿಸಲು ಬೇಕಾದಷ್ಟು ಆಧಾರಗಳಿವೆ. 'ಕಲಿ ಪಂದೆಯೆಂದು ಬಗೆಯದೆ। ಕುಲಜಂ ಕುಲಹೀನನೆಂದು ಬಗೆಯದೆ ತರುಣಂ। ಸಲೆ ವೃದ್ಧನೆಂದು ಬಗೆಯದೆ। ನೆಲೆಸುವೆ ನಿನ್ನಿಂ ನಿಕೃಷ್ಟರೆಂಬರು ಮೊಳರೇ॥ ಎಂದು ರನ್ನ ಲಕ್ಷ್ಮೀದೇವಿಯನ್ನು ಮೂದಲಿಸಲಿಲ್ಲವೇ?

'ಸಿರಿ ರಹಿತ ಶಿವನಾದೊಡಾತನ ಸರಕು ಮಾಡದು ಲೋಕ' ಎಂದು ಕುಮಾರವ್ಯಾಸ ಹೇಳಿಲ್ಲವೇ? ಬಾಣಭಟ್ಟ ಇರಲಿ, ಪಂಚತಂತ್ರದ ವಿಷ್ಣುಶರ್ಮನೇ ಹೇಳಿಲ್ಲವೇ?

It is better to be dead than poor! ಇಂಗ್ಲೀಷಿನ ತಲೆ ಬುಡವೇ ತಿಳಿಯದ ಶಿಕ್ಷಕರಿರುವ ಕಾನ್ವೆಂಟ್ರಿಗಳಲ್ಲಿ ಎಲ್ಕೆಜಿಗೆ ಸೇರಲು ಡೊನೇಷನ್ ಇದೆಯಲ್ಲಾ.

ಕ್ಷಮ್ಸಿ. ಈ ಉದ್ವನೆಯ ಪೀಠಿಕೆ ಬರೆಯುವುದು ನನ್ನ ಉದ್ದೇಶವಾಗಿರಲಿಲ್ಲ. ಹಾಸ್ಯ ಲೇಖನ ಎಂದರೆ ಬರೀ ಬಫೂನರಿ ಎಂದುಕೊಂಡಿರುವ ಹಾಸ್ಯ(ಅ?) ತಜ್ಞರಿಗೆ ಹಾಸ್ಯ ಬರೆಯಲೂ ಸ್ವಲ್ಪ (ಇ) ಸ್ಟಡಿ ಮಾಡುವುದು ಅಗತ್ಯ ಎಂದು ತೋರಿಸುವ ಯತ್ನ ಇದು, ಅಷ್ಟೇ!

ಈಗ ವಿಷಯಕ್ಕೆ ಬರೋಣ, ಮೊನ್ನೆ ಮೊನ್ನೆ ನಡೆದ ಚುನಾವಣೆಗಳು ಮುಗಿದ ನಂತರವೂ ಖುಷಿಯಾಗಿಯೇ ಇದ್ದ ಗುರ್ಸಿ ಇತ್ತೀಚೆಗೆ ನನ್ನನ್ನು ಕಂಡಾಗ angry young man ಅಥವಾ young turk ಆಗಿದ್ದ.

''ಯಾಕೋ ಹಿಂಗದಿ ಗುರ್ಸಿ'' ಎಂದು ಕೇಳಿದೆ.

''ಈ ಎಲೆಕ್ಷನ್ನಗೆ ನಂಗೆ ಬಂದ ದುಡ್ಡು ಎಷ್ಟು ಗೊತ್ತೇ?''

''ಅದು ನಿನ್ನ ಟ್ರೇಡ್ ಸೀಕ್ರೆಟ್. ನಮಗೇನ್ಗೊತ್ತು?''

''ಎಪ್ಪತ್ತು ಸಾವ್ರ ಮಾತಾಡಿದ್ದು. ದಕ್ಕಿದ್ದು ಹದಿನೈದು?''

''ಹೆಂಗಾತು ಹಿಂಗೆ?''

''ನಮ್ಮ ಮಾಜೀ ಚೀಫ್ ರಿಪೋರ್ಟರ್, ಯಾವ್ಯಾವ್ದೋ ಪಾರ್ಟಿ ಜತ್ಗೆ ಸಾಮೀಲಾಗಿ ಇಪ್ಪತ್ತೈದು ತಾವು ನುಂಗಿ, ರಾಜೀನಾಮೆ ಕೊಟ್ಟು ನಾಪತ್ತೆ ಆದ. ನಾನು ಸಪೋರ್ಟ್ ಮಾಡಿದ್ದ ಕ್ಯಾಂಡಿಡೇಟು ಸೋತು, ನನ್ನೇ ಒಂದು ಐದುಸಾವ್ರ ಕೊಡು ಅಂತ ಕೇಳಿದ. ಅವನವು ಇಪ್ಪತ್ತೈದು ಹರೋಹರ. ಇನ್ನು ನಮ್ಮ ಬಿಲ್ ಕಲೆಕ್ಟರುಗಳು, ಕೆಲ್ಸಗಾರ್ರು ಐದುಸಾವಿರ ಲೆಕ್ಕ ಸಿಗ್ದಂಗೆ ಮಾಡಿದ್ರು. ಇವತ್ತು ನಮ್ಮ ಮ್ಯಾನೇಜರು ಸಂಬ್ಳ ಕೇಳಿದ್ರೆ ಅವನಿಗೆ ಒಂದು ಸಾವ್ರ ಕೊಡಕ್ಕೆ ರಂಪು ರಾದ್ಧಾಂತ, ಹಿಂದು ಮುಂದೆ ನೋಡಬೇಕಾತು. ಅವನು ಡಬಲ್ ಗ್ರ್ಯಾಜುಯೇಟ್ ಅವನ ದುಡಿಮೆ ತಿಂಗಳಿಗೆ ಸಾವ್ರ. ಹೆಂಗೈತೆ ಈ ವಿಧಿವಿಲಾಸ. ದಿನಕ್ಕೆ ಐದು ಗಂಟೆ ಕೆಲ್ಸಿಲ್ಲದೋರಿಗೆ, ಹೋಗಿ ನೋಡಿದ್ರೆ ಆಫೀಸಿನಲ್ಲಿಲ್ದರಿಗೆ ಹತ್ರಿಂದ ಹದಿನೈದು ಸಾವ್ರ ಸಂಬ್ಳ, ಎಲ್ಲೈತಲೇ ನಿನ್ನ ಸಮಬಾಳು - ಸಮಪಾಲು, ಎಲ್ಲೈತಲೇ ನಿನ್ನ ಸಮಾಜವಾದ - ಸಮತಾವಾದ?''

''ಗುರ್ಸಿ, ನನ್ನ ನೋಡು. ಎಲ್ಲಾ ಹಣೇಬರ ಅಂತ ಮಜವಾಗಿ ಅದಿನಿ. ಎಪ್ಪತ್ನೇ ಇಸ್ವಿ ಬಾಕಿ ಇನ್ನು ಬರ್ತಲೇ ಐತೆ. ಇದ್ದದ್ದನ್ನ ಗಟ್ಯಾಗಿ ಹಿಡಕಂಡಿದಕ್ಕೆ ಆಗ ವಲ್ದು. ಏನು ಮಾಡಹಂಗೈತೆ? ಇರ್ಲೀ, ನೀನೇನು ಮಾಡ್ತುಕು ಅಂತ ಅದಿ.''

''ಈ ಪೇಪರ್ ಮುಚ್ಚನ ಅನ್ನಣೇ...''

''ಒಳ್ತು, ಬಿಡ್ತು ಅನ್ನು, ''ಕರ್ಣ ಪಿಶಾಚಿ'' ದಿನಪತ್ರಿಕೆ ನಿಂತರ ಮುಗಿಲು ಹಳ್ಳಿ ಒಳ್ಗೆ ಏನುಳೀತು?''

''ಐದವಲ್ಲಪ್ಪ, ನಿನ್ನ 'ಬೆಂಕಿ ಚೆಂಡು' 'ಢಂ-ಢಂ' ಇವು ಒಂದೊಂದು ಕೃಪಾ ಪೋಷಿತ ನಾಟಕ ಮಂಡಲಿಗೆ ಸೇರಿ ಬರೇ ಅಡ್ವರ್ಟೈಸ್‌ಗೆ ದಿನಕ್ಕೆ ಐದು ಹತ್ತು ಸಾವ್ರ ದುಡಿತವೆ.''

''ಹಂಗಲ್ಲೋ ಗುರ್‍ಸಿ ನಿಂಗೆ ದುಡ್ಡು ಬೇಕಾದ್ರೆ ನೀನೂ ಒಂದು ಕೃಪಾಪೋಷಿತ ನಾಟಕ ಮಂಡಲಿಗೆ ಸೇರು.''

''ಲೇ, ಆ ನಾಟಕ ಮಂಡಳಿಗಳ ಹೇಸಿಗೆ ದುಡ್ಡು ಯಾವನಿಗೆ ಬೇಕು?''

''ಹಂಗಾರೆ, ಹಿಂಗೇ ಲಾಟ್ರಿ ಹೊಡಿ.''

''ಈ ವರ್ಸ, ಮುಗಿಲಳ್ಳಿಗೆ ಇಪ್ಪತ್ತೈದು ಪತ್ರಿಕೆ ಹೊಂಟ್ವು, ಹನ್ನೆಳ್ಡು ಒಂದೇ ಸಂಚಿಕೆ ತಂದ್ವು, ಇನ್ನು ಹನ್ನೆಳ್ಡು ಮೂವತ್ತು ನಲವತ್ತು ದಿನದಗೆ ನಿಂತ್ಹೋದ್ವು.''

''ಇನ್ನೊಂದೇನಾತು?''

''ಅದರ ತನಿಖಾ ವರದಿ ತಯಾರು ಮಾಡಕ್ಕೆ ಅಂತ ಹೊಂಟಿದ್ದೆ. ದಾರೆಗೇ, ನಮ್ಮ ಎಲೆಕ್ಸನ್ ಗಿರಾಕಿಗಳು ಸಿಕ್ರು, ರೊಕ್ಕೆಲ್ಲಪ್ಪ ಅಂತ ಕೇಳ್ದೆ. ಅದಕ್ಕೆ ನಾವು ಎಲೆಕ್ಸನ್ ಸುರುವಿಗೇ ನಿಮ್ಮ ಚೀಪ್ ರಿಪೋರ್ಟರ್ ಕೈಗೆ ಕೊಟ್ವಿ ಅಂದ್ರು. ಪಿತ್ತ ನೆತ್ತಿಗೇರಿತ್ತು ನೀನೂ ಸಿಕ್ಕೆ. ಬಾಹೋಗಿ ಮೆಣ್ಸಿನ್ಕಾಯಿ ತಿಂದು ಛಾ ಕುಡ್ದು ಒಂದು ದಿಲ್ಬಹಾರ್ ಬೀಡಿ ಸೇದನ.''

ಯಾರೂ - ಅವನ ಖಾಯಂ ಓದುಗರು, ಸುಮಾರು ಎರಡು ಸಾವಿರ ಜನವನ್ನು ಬಿಟ್ಟು - ಗುರ್‍ಸಿಯನ್ನು ಲೈಕ್ ಮಾಡುವುದಿಲ್ಲ. ಪೋಲೀಸರು, ಜನತೆ, ಅಧಿಕಾರಿಗಳು, ರಾಜಕಾರಣಿಗಳು, ಕ್ರೀಡಾ ಪಟುಗಳು, ಮಹನೀಯರು ಮಹಿಳೆಯರು ಚಿಳ್ಳೆ ಪಿಳ್ಳೆಗಳು, ವೈಜ್ಞಾನಿಕ ಮನೋಭಾವದ ಹರಿಕಾರರು, ಮೂಢ ನಂಬಿಕೆಗಳ ಹಿಂಬಾಲಕರು ಇತ್ಯಾದಿ, ಇದರಲ್ಲಿ ಪೋಲೀಸರು ಗುರ್‍ಸಿಯನ್ನು ಲೈಕ್ ಮಾಡದಿರುವುದಕ್ಕೆ ಒಂದು ಕಾರಣವಿದೆ. ಗುರ್‍ಸಿ ಸರ್ವರ ಮಿತ್ರ - ಆದರೂ ಯಾರಿಗೂ ಅವನ್ನು ಕಂಡರಾಗುವುದಿಲ್ಲ.

ಈಗ ಹದಿನೈದು ವರ್ಷಗಳ ಹಿಂದೆ, ಇಡೀ ಭರತಖಂಡದ ಪೋಲೀಸ್ ಪರಿವಾರಕ್ಕೆ ಬೇಕಾದ ಒಬ್ಬ ಟಾಪ್ ನಕ್ಸಲೈಟನ್ನು ಹಿಡಿದೆವೆಂದು ಮುಗಿಲು ಹಳ್ಳಿ ಪೋಲೀಸರು ಸಾರಿ ಇಡೀ ನಾಡಿನ ಮನ್ನಣೆಯನ್ನು ದಕ್ಕಿಸಿಕೊಂಡರು. ಗುರ್‍ಸಿ ಅವನನ್ನು ಹೇಗೋ ಸಂದರ್ಶಿಸಿ ಕರ್ಣ ಪಿಶಾಚಿಯಲ್ಲಿ ಒಂದು ವರದಿ ಪ್ರಕಟಿಸಿದ.

ಬಂಧಿತನು ಟಾಪ್ ನಕ್ಸಲೈಟ್ ಅಲ್ಲ, ಚಂದಳ್ಳಿಯ ವಿಲೇಜ್ ಈಡಿಯಟ್ ಗಿಬಿಯ ಎನ್ನುವುದು ಅವನ ಸಿದ್ಧಾಂತ. ಅವನ ಬಿಡುಗಡೆ ಆಗಿದ್ದಿರಲಿ, ಮತ್ತೆ ಈ ಮಹತ್ಸಾಧನೆಯ ವಿಷಯ ಹೊರಕ್ಕೇ ಬರಲಿಲ್ಲ.

ಕ್ಷಮೆ ಇರಲಿ - ಮತ್ತೊಮ್ಮೆ, ಈ ಲೇಖನ ಗುರ್‍ಸಿಯ ಆರ್ಥಿಕ ಸಂಕಷ್ಟ, ಮಹತ್ಸಾಧನೆಗಳನ್ನು ಕುರಿತದ್ದಲ್ಲ. ಇದು ಹಾಸ್ಯ ಲೇಖಕರ ಸಂಕಷ್ಟಗಳನ್ನು ಕುರಿತದ್ದು ಈ ಬಗ್ಗೆ ನಾವೇನೂ in-depth ಸಂಶೋಧನೆ ಮಾಡಿಲ್ಲ. ನಮಗೆ ಅದೃಷ್ಟವಶಾತ್ ಯಾರೂ ಫೆಲೋಷಿಪ್ ಕೊಡಲಿಲ್ಲ. ಪಿ.ಎಚ್.ಡಿ. ಕೊಡಲು ದೀಕ್ಷೆ ಕೊಟ್ಟಿಲ್ಲ.

ಆದರೆ ಈ ಹಾಸ್ಯ ಲೇಖಕರ ಸುದ್ದಿ ಬಂದ ಕೂಡಲೇ ನನಗೆ ಗುರ್‍ಸಿಯ ನೆನಪು ಬರುತ್ತದೆ. ಅವನೇನು ಲೇವಡಿಕಾರನೋ, ಸಿನಿಕನೋ, ಇದ್ದದ್ದನ್ನು ಇದ್ದಂತೆ ಹೇಳುವ ವಾಸ್ತವವಾದಿಯೋ ನನಗೆ ಕಂಡುಹಿಡಿಯಲಾಗಲಿಲ್ಲ.

ಇಡೀ ರಾಷ್ಟ್ರ ರಾಜ್ಯಾದಿಗಳೆಲ್ಲಾ ಕೋಟಿಗಟ್ಟಲೆ ಖರ್ಚು ಮಾಡಿ ಪ್ರಜೆಗಳನ್ನೆಲ್ಲರನ್ನು ಸಾಕ್ಷರರನ್ನಾಗಿ ಮಾಡಿದುವಲ್ಲಾ, ಆದಿನ ಗುರ್‍ಸಿ 'ಕರ್ಣ ಪಿಶಾಚಿ'ಯಲ್ಲಿ ತಲೆ ಬರಹ ಹಾಕಿದ್ದು ಏನು ಗೊತ್ತೇ?

ಮುಗಿಲು ಹಳ್ಳಿ ಸಾಕ್ಷರಹಳ್ಳಿ(ಯಂತೆ) ಇದರಲ್ಲೇನು ವಿಶೇಷ ಎನ್ನುವಿರಾ? ಮುಗಿಲು ಹಳ್ಳಿಗರು ಸ್ವಾಭಿಮಾನದ ಖನಿಗಳು. ಮುಗಿಲು ಹಳ್ಳಿ ಮೆಗಾಸಿಟಿಯಾಗುವತ್ತ ದೌಡಾಯಿಸುತ್ತಿರಲು ಮುಗಿಲು ಹಳ್ಳಿಯನ್ನು ಸಾಕ್ಷರ ಸಿಟಿ ಎಂದು ಕರೆಯದೆ ಸಾಕ್ಷರ ಹಳ್ಳಿ ಎಂದು ಕರೆದರೆ ಪುರಪಿತೃಗಳೂ, ಪೌರರೂ ಗುರ್‍ಸಿಯ ಮೇಲೆ ರೇಗಿದ್ದರಲ್ಲಿ ಏನಾಶ್ಚರ್ಯ?

ವಸು ರೂಪರಾದ ಹಾಲೀ ಪುರಪಿತೃಗಳೂ, ರುದ್ರರೂಪರಾದ ಹಿಂದಿನ ಪುರಪಿತೃಗಳೂ, ಆದಿತ್ಯ ರೂಪರಾದ ಅವರ ಹಿಂದಿನವರೂ ಮತ್ತು ಈ ಮೊದಲೇ ಹೇಳಿದಂತೆ ಪೌರರೂ ಕಿಡಿಕಿಡಿಯಾದರು. ಸಾಕ್ಷರತೆಯನ್ನು ಹರಡುವುದರಲ್ಲಿ ನಿಯುಕ್ತರಾದ ಅಧಿಕಾರಿಗಳು ಕೆಂಡ ಕಾರಿದರು. ಗೋಡೆಗಳ ಮೇಲೆ ಕಂಬಗಳಿಂದ ಕಂಬಕ್ಕೆ ಮುಗಿಲು ಹಳ್ಳಿ ಸಾಕ್ಷರ ಸಿಟಿ ಎಂಬ ಬ್ಯಾನರುಗಳನ್ನು ಕಟ್ಟಿಸಿದರು.

ಮರುದಿನ ಗುರ್‍ಸಿ ಆರು ಸಂದರ್ಶನಗಳನ್ನು ಪ್ರಕಟಿಸಿದ. ಮೂವರು ಮಹಿಳೆಯರು, ಮೂವರು ಪುರುಷರು ಅದರಲ್ಲಿದ್ದ ಅರೆ ಬರೆ ಸಂಸ್ಕೃತ ಶಬ್ದಗಳನ್ನು ಬಿಟ್ಟು ಅವೆಲ್ಲವುಗಳ ಸಾರಾಂಶ ಹೀಗಿತ್ತು.

ಪ್ರಶ್ನೆ - 'ಏನಪಾ/ಏನವ್ವಾ, ಅಕ್ಸರ ಕಲಿತ್ರ್ಯಾ?

ಉತ್ತರ - ಯಾಕೆ ಕಲೀಬುಕು? ಕಲ್ಸರು ಯಾರು?

ಪ್ರಶ್ನೆ - ಯಾರೂ ಬರ್ಲಿಲ್ಲೇ ಕಲ್ಸಕ್ಕೆ?

ಉತ್ತರ - ನಮಿಗೊತ್ತಿಲ್ಲ

ಪ್ರಶ್ನೆ - 'ಶಿಕ್ಷಣವೇ ಶಕ್ತಿ' ನಿಮ್ಮ ಅಭಿಪ್ರಾಯವೇನು?

ಉತ್ತರ - ರೊಕ್ಕ ಇದ್ರೆ ಶಕ್ತಿ ಬರ್ತತೆ. ಸಿಕ್ಸೆ ಗಿಕ್ಸೆ ಯಾತಕ್ಬೇಕು? ಬೇಡವೆಂದರೂ ಮತ್ತೆ ರೊಕ್ಕದ ಸುದ್ದಿ ಬಂತು. ಅದನ್ನು ಸ್ವಲ್ಪ ಬಿತ್ತರವಾಗಿ ಬರೆಯಲು ಉಜ್ಜುಗಿಸುತ್ತೇವೆ.

ಸ್ಥಳೀಯ ಚುಟುಕು ಹಾಗೂ ಜೋಕ್ ಪರಿಷತ್ತಿನ ಪದಾಧಿಕಾರಿಗಳು ಗುರ್ಸಿಯನ್ನು ತಮ್ಮ ಪ್ರಥಮ ರಾಷ್ಟ್ರೀಯ ಸಮಾವೇಶಕ್ಕೆ ಅಧ್ಯಕ್ಷ ಹಾಗೂ ಮಾರ್ಗದರ್ಶಕನಾಗಿ ಆರಿಸಲು, ಅವನನ್ನು ನನ್ನತ್ತ ಬೆರಳು ತೋರಿಸಿ

''ನಂಗೆ ಇವೆಲ್ಲ ಬಗೆಹರ್ಯಲ್ಲ. ಈ ರಾಯನ್ನ ಕೇಳ್ರೀ'' ಎಂದ. ಗುರ್ಸಿಯ ಮಾತನ್ನು ಮೀರುವ ಧೈರ್ಯ ನನಗೆ ಬರಲಿಲ್ಲ.

ನಾನು ''ಮೊದಲೊಂದು ಸಮಾಲೋಚನಾ ಸಭೆ ಏರ್ಪಡಿಸೋಣ. ಸಮ್ಮೇಳನದಲ್ಲಿ ಯಾವ ನಿರ್ಣಯಗಳನ್ನು ಕೈಗೊಳ್ಳಬೇಕೋ ಚರ್ಚಿಸೋಣ'' ಎಂದೆ, ಒಪ್ಪಿದರು.

ಸಮಾಲೋಚನಾ ಸಭೆಯಲ್ಲಿ ಮೊದಲ ನಿರ್ಣಯ ಏನಾಗಬೇಕು ಎಂದು ಕೇಳಿದೆ. ಪದಾಧಿಕಾರಿಗಳಲ್ಲಿ ಕಿಂಗ್ ಮೇಕರ್ ಆದ 'ರಾಹು' ಕಾವ್ಯ ನಾಮಕನು, 'ಮೊದಲು ಹಾಸ್ಯ ಕವನ, ಲೇಖನಗಳಿಗೆ ಸಂಭಾವನೆ ಹೆಚ್ಚಿಸಬೇಕು' ಎಂದ.

'ಪದಾಧಿಕಾರಿಗಳಲ್ಲಿ ಎಷ್ಟು ಜನರ ಬರಹ ರಾಜ್ಯದ, ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದೆ?' ಎಂದು ಕೇಳಿದೆ.

ರಾಹು 'ನನ್ನ ಜೋಕ್ ಒಂದು, ರಾಜ್ಯ ಪತ್ರಿಕೆಯೊಂದರಲ್ಲಿ ಪ್ರಕಟವಾಗಿದೆ. ಏನೂ ಸಂಭಾವನೆ ಬರಲಿಲ್ಲ.'

ಸಂಭಾವನೆಯೇ ಇಲ್ಲ. ಇನ್ನು ಹೆಚ್ಚು ಮಾಡುವುದೆಲ್ಲಿ ಬಂತು'

'ಅಲ್ಲ ಸಾ, ಕತೆ, ಲೇಖನ ಬರೆದರೆ ಸಿಕ್ಕಾಪಟ್ಟೆ ಸಂಭಾವನೆ ಕೊಡುತ್ತಾರೆ ಅಂತರೇ?'

'ಬರೆಯಪ್ಪಾ ಕತೇನೇ ಬರಿ, ಕಾದಂಬರಿ ಬರೀ, ಪದ್ಯ ಬರೀ ಆಗ ಗೊತ್ತಾಗ್ತದೇ!'

'ಹಂಗಲ್ಲಾ ಸಾ, ಹಾಸ್ಯ ಜೀವನಕ್ಕೆ ಟಾನಿಕ್ಕು ಅಂತರೇ? ನಗುವು ಸಹಜದ ಧರ್ಮ ಅಂತ ಮಂಕುತಿಮ್ಮ ಹೇಳಿಲ್ಲೇ?'

'ನಗು. ಯಾರು ಬ್ಯಾಡ ಅಂತರೇ? ನಗಿಸುವುದು ಪರಧರ್ಮ ಅಂತಲೇ ಮಂಕುತಿಮ್ಮನಿಗೆ ಹೇಳಿಲ್ಲೇ?'

'ಹೌದು ಸಾ. ಆದರೆ, ನಗಸೋ ಲೇಖನಕ್ಕೆ ಯಾಕೆ ದುಡ್ಡು ಕಮ್ಮಿ ಅಂತೀನೀ. ನೀವೇನಂತೀರಿ?'

'ಪರಧರ್ಮ ಪಾಲಿಸೋನು, ದುಡ್ಡು ಅಂತ ಯಾಕೆ ಬಡ್ಕೋಬೇಕು? ಹರಿಶ್ಚಂದ್ರ ಧರ್ಮ ಪಾಲಿಸಿ, ದುಡ್ಡು ಬರ್ಲಿಲ್ಲ ಅಂತ ಅತ್ತನೇ, ನೀನೇ ಹೇಳು.'

''ಅಂದ್ರೆ, ಹಾಸ್ಯ ಬರದ್ರೆ ದುಡ್ಡು ಬ್ಯಾಡ ಅಂತೀರಾ?''

''ಬೇಕು ಹಾಸ್ಯ ಬರದ್ರೆ ದುಡ್ಡು ಇಲ್ಲ ಅಂತ ಯಾರಂದ್ರು? ಓದೋ ಅಂಥ ಲೇಖನ ಬರೀ. ಮೊದಲು ದುಡ್ಡು ಸ್ವಲ್ಪನೋ, ಹೆಚ್ಗೇನೋ ಬರ್ತದೆ, ಆಮ್ಯಾಲೆ ನೋಡು. ಎಷ್ಟು ಬರ್ದದೀ. ಅದ್ರಗೆ ಎಷ್ಟು ದುಡದೀ? ದುಡ್ಡು ಬೇಕಾದ್ರೆ ಹಾಲು ಉತ್ಪಾದಕರ ಸಂಘ ಆರಂಭಿಸು. ನೀರುಳ್ಳಿ ಅಂದ್ರೆ ಉಳ್ಳಾಗಡ್ಡಿ ವ್ಯಾಪಾರ ಮಾಡು. ಬೀಡೀ ಅಂಗ್ಡಿ ಇಡು. ಅದು ಬಿಟ್ಟು ಬರ್ಯಕ್ಕೆ, ಅದ್ರಗೂ ಕನ್ನಡ್ದಗೇ, ಅದ್ರಗೂ ಹಾಸ್ಯ ಬರೀತಿನೀ ಅಂತ ಹೊಂಟ್ರೆ ಅನುಭವ್ಸು. ದುಡ್ಡು ಕೇಳ್ಬ್ಯಾಡ ಅಷ್ಟೆ.''

''ನಿಮ್ಮ ಮಾತೇ ಅರ್ಥ ಆಗ್ಲೊಲ್ಲು.''

'ನಂಗೂ ಅರ್ಥ ಆಗ್ಲೊಲ್ಲು. ಹಾಸ್ಯಪತ್ರಿಕೆ ಬರ್ತವಲ್ಲ. ಅದ್ರಗೆ ಸಂಪಾದಕ್ರು ದುಡೀತರೋ, ಕಳ್ಕಂತರೋ ನಿಂಗೇನಾರೂ ಗೊತ್ತೇ?''

''ಗೊತ್ತಿಲ್ಲ, ಸಾ.''

''ದುಡ್ಡು ಯಾರ್ಗೆ ಬರ್ತವೆ ಗೊತ್ತೇ?''

''ಗೊತ್ತಿಲ್ಲ, ಸಾ.''

''ದುಡ್ಡು, ದುಡ್ಡಿರ ಹತ್ರಕ್ಕೇ ಹೋಗ್ತವೇ. ಸಮುದ್ರ ಐತಪ್ಪ, ನದೀ ನೀರೆಲ್ಲಾ ಅಲ್ಲೇ ಹೋಗ್ತವೇ, ಹಂಗೇ ಮೊದ್ಲು ನೀನು ದುಡ್ಡು ದುಡಿ. ಆಮ್ಯಾಲೆ ಹಾಸ್ಯ ಬರೀ. ಬರ್ತವೋ ಇಲ್ಲೋ ನೋಡು?''

''ಅಲ್ಲ ಸಾ, ಪ್ರೋತ್ಸಾಹ, ರೆಕಗ್ನಿಷ್ ಅಂತ ಇರ್ತವಲ್ಲ ಅವಿದ್ರೇ ತಾನೇ ಹಾಸ್ಯ ಬರ್ಯಕ್ಕೆ ಸಾಧ್ಯ.''

''ಹಂಗಾರೆ ಒಂದ್ಕೆಲ್ಸ ಮಾಡು. ಹಾಸ್ಯ ಪದ್ಯ ಬರೀ. ಅದನ್ನ ಸ್ವಂತ ಖರ್ಚ್‌ನಗೆ ಕ್ಯಾಸೆಟ್ ಮಾಡ್ಸು ಹೈಕ್ಲಾಸ್ ಗಾಯಕ ಗಾಯಕಿಯರು ಅದ್ರೊಳ್ಗೆ ಹಾಡು ಹೇಳ್ಲಿ.''

''ಅಲ್ಲ ಸಾ. ಒಂದು ಕ್ಯಾಸೆಟ್ ಮಾಡ್ಸಕ್ಕೆ ಎಷ್ಟು ರೊಕ್ಕ ಬೇಕು?''

''ಒಂದೈವತ್ತೋ ಅರವತ್ತೋ ಸಾವ್ರ ಬೇಕಾಗಭೌದು. ನಾನು ಆ ತಳ್ಳಿಗೆ

ಹೋಗಿಲ್ಲ.''

''ಅಷ್ಟಕಂದು ರೊಕ್ಕ ಬೇಕೇ ಸಾ. ಎಲ್ಲಿಂದ ತರನ?''

''ನನ್ನೇನು ಕೇಳ್ತಿ? ಗುರ್ನಿ ಈ ಮೀಟಿಂಗಿಗೆ ಕಳಿಸಿದ. ನಾನು ಬಂದೆ.''

''ಹಂಗಾರೆ ಹಾಸ್ಯಕ್ಕೆ ಭವಿಷ್ಯವಿಲ್ಲವೇ ಸಾ''

''ಹಾಸ್ಯ ಸಾಹಿತ್ಯ ಸಂಭಾವನೆಗೆ, ಭೂತವೇ ಇಲ್ಲ. ವರ್ತಮಾನ ಇಲ್ಲೇ ಐತೆ. ಭವಿಷ್ಯ ಯಾರು ಬಲ್ಲರು?''

''ಹಂಗಾರೆ ಏನು ನಿರ್ಣಯ ಮಾಡನ?''

''ಒಂದು ಕೆಲ್ಸ ಮಾಡಿದ್ರೆ ಹಾಸ್ಯಕ್ಕೆ ರೊಕ್ಕ ಬಂದ್ರೂ ಬರಬೌದು.''

''ಏನು ಕೆಲ್ಸ ಸಾ?''

''ಅಖಿಲ ಕರ್ನಾಟಕ ಹಾಸ್ಯ ಬರಹಗಾರರ ಒಕ್ಕೂಟವನ್ನು ಸ್ಥಾಪಿಸಬೇಕು. ಒಕ್ಕೂಟದವರು ಒಂದು ಜೋಕಿಗೆಷ್ಟು, ಒಂದು ಪದ್ಯಕ್ಕೆಷ್ಟು, ಒಂದು ನಾಟಕಕ್ಕೆಷ್ಟು, ಒಂದು ಲೇಕನಕ್ಕೆಷ್ಟು, ಒಂದು ಕಾದಂಬರಿಗೆಷ್ಟು ಅಂತ ರೇಟು ಫಿಕ್ಸ್‌ಮಾಡಿ ಎಲ್ಲ ಪತ್ರಿಕೆಗಳಿಗೂ ತಿಳಿಸಬೇಕು. ಒಕ್ಕೂಟದ ಸದಸ್ಯರಲ್ಲದವರ ಲೇಖನಗಳನ್ನು ಯಾವ ಪತ್ರಿಕೆಯೂ ಪ್ರಕಟಿಸದಂತೆ ಧರಣಿ, ಮುಷ್ಕರ, ರಸ್ತಾರೋಕೋಗಳನ್ನೇರ್ಪಡಿಸುವ ಒಂದು ಕಾರ್ಯದಳ ಏರ್ಪಡಿಸಬೇಕು. ಒಕ್ಕೂಟದ ಸದಸ್ಯತ್ವಕ್ಕೆ ಐದುನೂರು ರೂಪಾಯಿ ಶುಲ್ಕ ಆಗ ದುಡ್ಡು ಕಾಣಬಹುದು.''

''ಇದೆಲ್ಲಾ ಸಾಧ್ಯವೇ ಸಾ?''

''ಸಾಧ್ಯ ಅಂತ ಇಟ್ಕಂಡ್ರೂ, ಪತ್ರಿಕೆಯವರು ಒಂಪ್ಗೆಂಡ್ರೂ, ಒಂದು ಕಷ್ಟ ಐತೆ ಇದ್ರಗೆ.''

''ಏನ್ಸಾ?''

''ಪತ್ರಿಕೆ ಒಳಗೆ ಹಾಸ್ಯವೇ ಪ್ರಿಂಟ್ ಮಾಡಬಾರ್ದು ಅಂತ ಸಂಪಾದಕರು ತೀರ್ಮಾನಿಸಬಹುದು. ಇನ್ನೂ ಒಂದು ತೊಂದ್ರೆ ಐತೆ''

''ಮತ್ತೇನ್ಸಾ?''

''ಖೋಟಾ ಸದಸ್ಯತ್ವ ಪತ್ರಿಕೆ ನೀಡಿ, ಸಿಕ್ಕಷ್ಟು ದುಡ್ಡಿಗೆ ಪತ್ರಿಕೆಗೆ ಬರೆಯುವವರನ್ನು ತಡೆಯಲು ಯಾರಿಗೆ ಸಾಧ್ಯ?''

ಸಮಾಲೋಚನಾ ಸಭೆಯು ಯಾವ ನಿರ್ಣಯವನ್ನು ಕೈಗೊಳ್ಳಲಿಲ್ಲ.

# ಕೊರವಂಜಿ ಅಪರಂಜಿ ಟ್ರಸ್ಟ್

ಉತ್ತಮ ಅಭಿರುಚಿಯ ನಗೆ ಸಾಹಿತ್ಯವನ್ನು ಗುರುತಿಸಿ
ಬೆಳಕಿಗೆ ತರುವುದು ನಮ್ಮ ಧ್ಯೇಯ

## ನಮ್ಮ ಪ್ರಕಟಣೆಗಳು

| | |
|---|---|
| ಸುಬ್ಬತ್ತೆ ಮತ್ತು ಕಂಪ್ಯೂಟರ್ | ಶಾಂತಾ ರಘು |
| ಯಾರೋ | ಓಂಪ್ರಕಾಶ್ |
| ಕಂಚಿ ಕ್ಯಾಥರೀನ್ ಮತ್ತು ಕೋಕಾ ಕೋಲ | ನಂದಿನಿ ಕಾಪಡಿ |
| ಕೊರವಂಜಿ ಕಸ್ತೂರಿ | ನಾ. ಕಸ್ತೂರಿ |
| ನಲಿವುಗರಿ | ಕಮಲಾ ರಾಮಸ್ವಾಮಿ<br>ಹಾಸ್ಯೋತ್ಸವ-99 ರಂದು ಬಿಡುಗಡೆ |
| ಬೆಸ್ಟ್ ಆಫ್ ಕೊರವಂಜಿ | ಸಂಕಲನ<br>ಹಾಸ್ಯೋತ್ಸವ-99 ರಂದು ಬಿಡುಗಡೆ |

*ಪ್ರತಿಗಳಿಗೆ ಇಲ್ಲಿ ಸಂಪರ್ಕಿಸಿರಿ:*

**ಕೊರವಂಜಿ ಅಪರಂಜಿ ಟ್ರಸ್ಟ್**
ನಂ. 36, 6ನೇ ಮೇನ್ ರಸ್ತೆ,
ಮಲ್ಲೇಶ್ವರಂ, ಬೆಂಗಳೂರು - 560 003.
ದೂರವಾಣಿ: 3345259,
ಈಮೇಯ್ಲ್: aparanji@hotmail.com

Printed by V.R NATH for the Publisher KORAVANJI APARANJI TRUST. Published by KORAVANJI APARANJI TURST, 36, 6th Main Road, Malleswaram, Bangalore - 560 003
PRINTED AT RAVI GRAPHICS, 49, 4th Cross, SSI Area, Rajajinagar, Bangalore - 560 010
Editor : M. SHIVAKUMAR